# ಬ್ಯಾಂಕಿಂಗ್ ಪ್ರಪಂಚ

ಸಂಪಾದಕರು

ಎಚ್ಚೆಸ್ಕೆ

ಸಂಪುಟ ೭

★

ಸಂಚಿಕೆ ೨

ಜೂನ್

೧೯೮೬

## ಈ ಸಂಚಿಕೆಯಲ್ಲಿ



ಸಮನ್ವಯ ಸಮಿತಿ (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)

ಭಾರತೀಯ ಸ್ಟೇಟ್ ಬ್ಯಾಂಕ್, ನಂ. ೨೨ ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು ೫೬೦೦೦೨

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ತ್ರೈಮಾಸಿಕ

# ಬ್ಯಾಂಕಿಂಗ್ ಪ್ರಪಂಚ

ಸಂಪುಟ ೭ ಜೂನ್ ೧೯೮೬ ಸಂಚಿಕೆ ೨

ಸಂಪಾದಕ

**ಎಚ್ಚೆಸ್ಕೆ**

★

**ಸಮನ್ವಯ ಸಮಿತಿ : ಆಡಳಿತ ವರ್ಗ**

**1986–87**

★

ಅಧ್ಯಕ್ಷ

ಪ್ರೋ. ಕೃ. ಅನಂತಸ್ವಾಮಿ

★

ಉಪಾಧ್ಯಕ್ಷರು

ಶಂಕರ ಜಾಲವಾದಿ

ಬೆಂ. ಶ್ರೀ. ರವೀಂದ್ರ

★

ಪ್ರಧಾನ ಕಾರ್ಯದರ್ಶಿ

ಹಾಗೂ ಪ್ರಕಾಶಕ

ಪಾ. ರಾಜಗೋಪಾಲ

★

ಉಪ ಪ್ರಧಾನ ಕಾರ್ಯದರ್ಶಿಗಳು

ಟಿ. ಕೆ. ರಂಗನಾಥ

ಚಿ. ರಾ. ವೇಣುಗೋಪಾಲ

★

ಖಜಾಂಚಿ

ಕ. ನ. ಜಯರಾಮ

★

ಆಂತರಿಕ ಲೆಕ್ಕ ಪರಿಶೋಧಕ

ಸುದರ್ಶನ

★

**ವಾರ್ಷಿಕ ಚಂದಾ : ರೂ. 12**

**ಆಜೀವ ಚಂದಾ : ರೂ. 150**

## ಲೇಖಕರಿಗೆ ಸೂಚನೆಗಳು

'ಬ್ಯಾಂಕಿಂಗ್ ಪ್ರಪಂಚ'ದಲ್ಲಿ ಪ್ರಕಟನೆಗಾಗಿ ಹಣ, ಬ್ಯಾಂಕಿಂಗ್ ಮತ್ತು ತತ್ಸಂಬಂಧಿ ವಿಷಯಗಳನ್ನು ಕುರಿತ ಲೇಖನಗಳಿಗೆ ಸ್ವಾಗತವಿದೆ.

ಲೇಖನಗಳು ಸ್ವತಂತ್ರವಾಗಿರಬಹುದು, ಇಲ್ಲವೇ ಅನುವಾದಗಳಾಗಿರಬಹುದು. ಲೇಖನ ಅನುವಾದವಾಗಿದ್ದರೆ ಮೂಲ ಲೇಖನದ ಶೀರ್ಷಿಕೆ, ಮೂಲ ಲೇಖಕರ ಹೆಸರು ಮತ್ತು ವಿಳಾಸ, ಮೂಲ ಲೇಖನ ಪ್ರಕಟವಾಗಿದ್ದರೆ ಆ ಬಗ್ಗೆ ವಿವರಗಳು ಇವನ್ನೂ, ಅನುವಾದ ಮಾಡಿ ಪ್ರಕಟಿಸಲು ಮೂಲ ಲೇಖಕರ ಅನುಮತಿಯನ್ನೂ ಅನುವಾದದೊಂದಿಗೆ ಕಳುಹಿಸಿಕೊಡಬೇಕು.

ಲೇಖಕರು ಲೇಖನವನ್ನು ಕಾಗದದ ಒಂದೇ ಮಗ್ಗುಲಿನಲ್ಲಿ ಸ್ಫುಟವಾಗಿ ಬರೆದಿರಬೇಕು. ಪುಟದ ಎಡಬದಿಯಲ್ಲಿ ಸಾಕಷ್ಟು ಅಂಚು ಬಿಟ್ಟಿರಬೇಕು. ಒಂದು ಸಾಲಿಗೂ ಇನ್ನೊಂದು ಸಾಲಿಗೂ ನಡುವೆ ಧಾರಾಳವಾಗಿ ಸ್ಥಳ ಬಿಟ್ಟಿರಬೇಕು.

ಲೇಖಕರು ತಮ್ಮ ಹೆಸರು ವಿಳಾಸಗಳನ್ನೂ ತಮ್ಮ ಸಂಕ್ಷಿಪ್ತ ಪರಿಚಯವನ್ನೂ ಲೇಖನದೊಂದಿಗೆ ಕಳುಹಿಸಿಕೊಡಬೇಕು. ಈ ವಿವರಗಳಿಲ್ಲದ ಲೇಖನಗಳನ್ನು ಪ್ರಕಟಿಸಲಾಗುವುದಿಲ್ಲ.

ಲೇಖನವನ್ನು ಪ್ರಕಟಿಸುವ ಅಥವಾ ಬಿಡುವ, ಯುಕ್ತವೆನಿಸಿದ ಮಾರ್ಪಾಟು ಮಾಡಿ ಪ್ರಕಟಿಸುವ ಅಧಿಕಾರ ಸಂಪಾದಕರಿಗುಂಟು.

ಪ್ರಕಟವಾಗದ ಲೇಖನಗಳನ್ನು ಹಿಂದಿರುಗಿಸಲು ವ್ಯವಸ್ಥೆಯಿಲ್ಲ. ಲೇಖಕರು ಪ್ರಕಟನೆಗಾಗಿ ಕಳುಹಿಸುವ ಲೇಖನದ ಪ್ರತಿಯೊಂದನ್ನು ತಮ್ಮ ಬಳಿ ಇಟ್ಟುಕೊಳ್ಳುವುದು ಒಳ್ಳೆಯದು.

ಬ್ಯಾಂಕಿಂಗ್ ಪ್ರಪಂಚದಲ್ಲಿ ವಿಮರ್ಶೆಗಾಗಿ ಪುಸ್ತಕ ಕಳುಹಿಸುವವರು ಅದರ ಎರಡು ಪ್ರತಿಗಳನ್ನು ಕಳುಹಿಸಿಕೊಡಬೇಕು.

ಬ್ಯಾಂಕಿಂಗ್ ಪ್ರಪಂಚದಲ್ಲಿ ಪ್ರಕಟವಾದ ಲೇಖನಗಳ ಬಗ್ಗೆ ಅಭಿಪ್ರಾಯಗಳನ್ನು ಪ್ರಕಟನೆಗಾಗಿ ಬರೆದು ಕಳುಹಿಸಬಹುದು. ಇವು ಸಣ್ಣವಾಗಿರಬೇಕು. ಅಭಿಪ್ರಾಯಗಳೊಂದಿಗೆ ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಬರೆದಿರಬೇಕು.

ಈ ಪತ್ರಿಕೆಯಲ್ಲಿ ಪ್ರಕಟವಾಗುವ ಲೇಖನಗಳ ಅಭಿಪ್ರಾಯಗಳು ಆಯಾ ಲೇಖಕರವು. ಇವನ್ನು ಸಂಪಾದಕರಾಗಲಿ ಪ್ರಕಾಶಕರಾಗಲಿ ಒಪ್ಪಿರುತ್ತಾರೆ ಎಂದೇನೂ ಅಲ್ಲ.

# ‘ಬ್ಯಾಂಕಿಂಗ್ ಪ್ರಪಂಚ’ದ ಆಜೀವ ಚಂದಾದಾರರು

(ಹಿಂದಿನ ಸಂಚಿಕೆಯಿಂದ ಮುಂದುವರಿದ ಪಟ್ಟಿ)

444 ಆರ್. ಜಯಕುಮಾರ್
445 ಬಿ. ಎನ್. ನರಸಿಂಹಮೂರ್ತಿ
446 ಎಂ. ಜಿ. ರಂಗನಾಥರಾವ್
447 ಜಿ. ಡಿ. ಚೂಡಾಮಣಿ
448 ಗೋವಿಂದ ನೆಟ್ಟರ್
449 ಸಿ. ಎಸ್. ರಾಮಕೃಷ್ಣ
450 ಟಿ. ಎಲ್. ಶಂಕರಪ್ಪ
451 ಕೆ. ಎಸ್. ವಿಜಯಕುಮಾರ್
452 ಶ್ಯಾಮಸುಂದರ ಮಯ್ಯ
453 ಶ್ರೀಮತಿ ಕೆ. ವಿ. ವಿಮಲಾಂಬ
454 ಜಿ. ನಾಗಭೂಷಣ
455 ತ. ಶ್ರೀನಿವಾಸರಾವ್
456 ಭೀಮರಾವ್
457 ಕೆ. ವಾಸುದೇವರಾವ್
458 ಸುಬ್ರಹ್ಮಣ್ಯ ಗಲಗಲಿ
459 ಮದನಮೋಹನರಾವ್

ಭಾರತೀಯ ಸ್ಟೇಟ್ ಬ್ಯಾಂಕಿನ ಈ ಮುಂದಿನ ಶಾಖೆಗಳು :

460 ಮನ್ನೇಕಹಳ್ಳಿ
461 ಏರ್ ಫೋರ್ಸ್ ಸ್ಟೇಷನ್ (ಯಲಹಂಕ)
462 ಜಯಮಹಲ್
463 ರವೀಂದ್ರನಾಥ ಠಾಗೋರ್ ನಗರ
464 ಆರ್.ಪಿ.ಸಿ. ಲೇಔಟ್
465 ಎ.ಎಫ್.ಎಸ್., ಜಾಲಹಳ್ಳಿ (ಪಶ್ಚಿಮ)
466 ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್
467 ಸೇವಾ ಶಾಖೆ
468 ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಬೆಂಗಳೂರು ಶಾಖೆ
469 ರಾಜಾರಾಮ ಹೆಗಡೆ
470 ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಶೃಂಗೇರಿ
471 ದೇಶೀಯ ವಿದ್ಯಾಪೀಠ, ಬಾಲಕಿಯರ ಪ್ರೌಢಶಾಲೆ, ಚಿಕ್ಕನಾಯಕನಹಳ್ಳಿ
472 ಗಾಂಧಿ ಸ್ಮಾರಕ ಸೇವಾಶ್ರಮ ಟ್ರಸ್ಟ್, ಸುರೇಬಾನ—ಮಣಿಹಾಳ

**ಬ್ಯಾಂಕಿಂಗ್ ಪ್ರಪಂಚಕ್ಕೆ ಆಜೀವ ಚಂದಾ ರೂ. 150.00**

“ಸಮನ್ವಯ ಸಮಿತಿ”ಯ ಹೆಸರಿಗೆ ಬರೆದ ಚೆಕ್/ಡ್ರಾಫ್ಟ್ ಮೂಲಕ ಚಂದಾ ಪಾವತಿ ಮಾಡಬಹುದು.

**ಸಮನ್ವಯ ಸಮಿತಿ**

ಆಶ್ರಯ : ಭಾರತೀಯ ಸ್ಟೇಟ್ ಬ್ಯಾಂಕ್
ಬೆಂಗಳೂರು ನಗರ ಶಾಖೆ
ಬೆಂಗಳೂರು 560 002

---

**ಶ್ರೀ ಅರಕೇಶ್ವರ ಪ್ರಸನ್ನ**

# ಭಾಗ್ಯಲಕ್ಷ್ಮಿ ನ್ಯೂಸ್ ಏಜೆನ್ಸೀಸ್

**79, ಪೈಪ್‌ಲೈನ್ ರಸ್ತೆ**
**ಶ್ರೀನಗರ, ಬೆಂಗಳೂರು 560 050**

ವಿವಿಧ ಭಾಷೆಗಳ ದಿನಪತ್ರಿಕೆ, ವಾರಪತ್ರಿಕೆ, ಮಾಸಪತ್ರಿಕೆ
ಮತ್ತು ವಿಶೇಷ ಸಂಚಿಕೆಗಳಿಗೆ ನಮ್ಮನ್ನು ಸಂಪರ್ಕಿಸಿ

---

# ಸಂಪಾದಕೀಯ

## ಶೃಂಗೇರಿಯ ಕಮ್ಮಟ

ಈಚೆಗೆ ಶೃಂಗೇರಿಯಲ್ಲಿ ನಡೆದ ಒಂಬತ್ತನೆಯ ಬ್ಯಾಂಕಿಂಗ್ ಕಮ್ಮಟ ಅನೇಕ ದೃಷ್ಟಿಗಳಿಂದ ವೈಶಿಷ್ಟ್ಯಪೂರ್ಣವಾದ್ದು. ಹಾಗೆ ನೋಡುವುದಾದರೆ, ಇದುವರೆಗೆ ನಡೆದಿರುವ ಒಂದೊಂದು ಬ್ಯಾಂಕಿಂಗ್ ಕಮ್ಮಟವೂ ವಿಶಿಷ್ಟವೇ ; ಹಿಂದಿನ ಕಮ್ಮಟಗಳಿಗಿಂತ ಹೆಚ್ಚು ಅರ್ಥಪೂರ್ಣವಾಗಲು, ಭಿನ್ನವಾಗಿರಲು ಪ್ರತಿಯೊಂದು ಕಮ್ಮಟವೂ ಯತ್ನಿಸುತ್ತ ಬಂದಿದೆ ; ಗುರಿಯ ಸಾಧನೆಯಲ್ಲಿ ಇನ್ನೊಂದು ಮಜಲು ಮುಂದೆ ನಡೆಯುತ್ತಬಂದಿದೆ. ಸದಾ ಪರಿವರ್ತನಶೀಲವಾದ, ಹೊಸ ಹೊಸ ಪಂಥಾಹ್ವಾನಗಳನ್ನು ಎದುರಿಸುತ್ತಿರುವ ಬ್ಯಾಂಕಿಂಗಿನ ಆಚಾರ ವಿಚಾರ ಪ್ರಚಾರಗಳಿಗೆ ಸಂಬಂಧಿಸಿದಂತೆ ಕನ್ನಡದಲ್ಲಿ ಚಿಂತನೆ ನಡಸುವುದರ ಜೊತೆಗೆ ಬ್ಯಾಂಕ್ ವ್ಯವಹಾರಕ್ಕೆ ಕನ್ನಡದಲ್ಲಿ ಅಗತ್ಯವಾದ ಅಧೋರಚನೆಯ ನಿರ್ಮಾಣವೂ, ಬ್ಯಾಂಕಿಂಗ್ ಕುರಿತ ಚಿಂತಕರ ಹಾಗೂ ಲೇಖಕರ ಪಡೆಯೊಂದನ್ನು ರೂಪಿಸುವುದೂ, ಕನ್ನಡದಲ್ಲಿ ಬ್ಯಾಂಕ್ ವ್ಯವಹಾರ ಮತ್ತು ಈ ಕುರಿತ ಚಿಂತನೆ ಅಗತ್ಯವಷ್ಟೇ ಅಲ್ಲದೆ, ಅನಿವಾರ್ಯವೂ ಹೌದು ಎಂಬ ನಂಬಿಕೆಯನ್ನು ಮೂಡಿಸುವುದೂ ಬ್ಯಾಂಕಿಂಗ್ ಕಮ್ಮಟಗಳ ಗುರಿ. ಕಮ್ಮಟದಿಂದ ಕಮ್ಮಟಕ್ಕೆ ಇದರಲ್ಲಿ ಆಸಕ್ತಿ ಬೆಳೆಯುತ್ತಿದೆ. ಇದರಲ್ಲಿ ಪಾಲ್ಗೊಳ್ಳುವವರು ಇದರ ಯಶಸ್ಸಿಗೆ ಬಹುಮಟ್ಟಿಗೆ ಕಾರಣ. ಬ್ಯಾಂಕಿಂಗ್ ವ್ಯವಸ್ಥಾಪಕ ವರ್ಗವೂ ಇದರಲ್ಲಿ ಹೆಚ್ಚು ಹೆಚ್ಚು ಕಾಳಜಿ ವಹಿಸುತ್ತಿದೆ. ಬ್ಯಾಂಕುಗಳು ಅಧಿಕೃತವಾಗಿ ತಮ್ಮ ಪ್ರತಿನಿಧಿಗಳನ್ನು ಕಮ್ಮಟದಲ್ಲಿ ಭಾಗವಹಿಸಲು ಕಳಿಸುತ್ತಿವೆ. ಇವೆಲ್ಲಾ ಶುಭ ಚಿಹ್ನೆಗಳು. ನಾಡಿಗೆ ಒಳ್ಳೆಯದಾಗಬಹುದೆಂಬ ಆಶೆ ಅಂಕುರಿಸುತ್ತಿದೆ.

ಶೃಂಗೇರಿಯ ಬ್ಯಾಂಕಿಂಗ್ ಕಮ್ಮಟ ಯಶಸ್ವಿಯಾಗಲು ಅಲ್ಲಿಯ ಸಾರ್ವಜನಿಕ ಪ್ರಮುಖರೂ ಸ್ಥಳೀಯ ಸಂಘ ಸಂಸ್ಥೆಗಳೂ ಕಾರಣ. ಶೃಂಗೇರಿಯ ವಾಣಿಜ್ಯ ಪದವೀಧರರ ಸಂಘ, ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ಶೃಂಗೇರಿ ಶಾಖೆ—ಇವು ಇದಕ್ಕಾಗಿ ವಿಶೇಷವಾಗಿ ಶ್ರಮಿಸಿವೆ. ಶೃಂಗೇರಿಯ ಮೈಸೂರು ಬ್ಯಾಂಕ್ ಶಾಖೆ ಇದೇ ಸಮಯಕ್ಕೆ ತನ್ನ ಹತ್ತು ವರ್ಷಗಳ ಸಾರ್ಥಕ ಸೇವೆ ಮುಗಿಸಿ ಮುನ್ನಡೆದಿರುವುದೂ, ಈ ಸಂದರ್ಭದಲ್ಲಿ ಅದು ದಶಮಾನೋತ್ಸವವನ್ನಾಚರಿಸಿದ್ದೂ ಗಮನಾರ್ಹ. ಸ್ಥಳೀಯ ಪ್ರಮುಖರೂ ಪತ್ರಿಕೆಗಳೂ ಕಮ್ಮಟದ ಕಲಾಪಗಳಲ್ಲಿ ಆಸಕ್ತಿ ತೋರಿಸಿದ್ದು ಅಭಿನಂದನೀಯ. ಶೃಂಗೇರಿಗೆ ಬಹುಶಃ ಇದು ಸಹಜವೇ. ಶೃಂಗೇರಿ ಸಣ್ಣ ಊರಾದರೂ ಧಾರ್ಮಿಕ ಸಾಂಸ್ಕೃತಿಕ ನೆಲೆ, ನಿರ್ವೈರ ಕ್ಷೇತ್ರ. ಇಲ್ಲಿ ಹಿಂದೂ ಮುಸ್ಲಿಮರು ಹಿಂದಿನಿಂದಲೂ ಕೂಡಿ ಬಾಳುವೆ ನಡಸುತ್ತ ಬಂದಿದ್ದಾರೆ. ವ್ಯವಹಾರ ಕ್ಷೇತ್ರದಲ್ಲೂ ಶೃಂಗೇರಿಯದೊಂದು ವೈಶಿಷ್ಟ್ಯ. 1914ರಷ್ಟು ಹಿಂದೆ ಶೃಂಗೇರಿಯಲ್ಲೊಂದು ಬ್ಯಾಂಕು (ಶೃಂಗೇರಿ ಶ್ರೀ ಶಾರದಾ ಬ್ಯಾಂಕ್ ಲಿ.) ಸ್ಥಾಪಿತವಾಗಿತ್ತೆಂಬುದು ಇತಿಹಾಸದ ಸಂಗತಿ. (ಇದೇ ಸಂಚಿಕೆಯಲ್ಲಿ ಪ್ರಕಟವಾಗಿರುವ, ಕರ್ನಾಟಕದಲ್ಲಿ ಬ್ಯಾಂಕುಗಳ ಹುಟ್ಟು ಮತ್ತು ಬೆಳವಣಿಗೆ ಎಂಬ ಲೇಖನವನ್ನು ನೋಡಿ ) ಜಿಲ್ಲೆಯ ಮುಖ್ಯ ಸ್ಥಳವಾದ ಚಿಕ್ಕಮಗಳೂರಿಗೆ ಇಲ್ಲದ ಭಾಗ್ಯ ಈ ಊರಿನದು. 1962ರಷ್ಟು ಈಚೆಗೆ ಈ ಬ್ಯಾಂಕು ಕರ್ನಾಟಕ ಬ್ಯಾಂಕಿನಲ್ಲಿ ವಿಲೀನಗೊಂಡಿತು. ಅಂತೂ ಇಲ್ಲಿಯ ಜನ ಧರ್ಮ ಸಂಸ್ಕೃತಿ ಪ್ರಿಯರು, ಸಾಮರಸ್ಯ ಸಾಧಕರು, ವ್ಯವಹಾರವಿದರು ಎಂಬುದನ್ನು ತೋರಿಸಿದ್ದಾರೆ. ಇಂಥ ಪ್ರಶಾಂತ ರಮ್ಯ ಸ್ಥಳದಲ್ಲಿ ಬ್ಯಾಂಕಿಂಗ್ ಕಮ್ಮಟ ತುಂಬ ಯಶಸ್ವಿಯಾಯಿತೆಂಬುದರಲ್ಲಿ ಆಶ್ಚರ್ಯವಿಲ್ಲ.

ಈ ಬಾರಿಯ ಕಮ್ಮಟದಲ್ಲಿ ಪಾಲ್ಗೊಂಡಿದ್ದವರ ಸಂಖ್ಯೆ ಇಪ್ಪತ್ತೈದಕ್ಕೂ ಮಿಗಿಲು. ಆರಂಭದಿಂದಲೂ ಪಾಲ್ಗೊಳ್ಳುತ್ತ ಬಂದಿರುವವರ ಜೊತೆಗೆ ಈಚೆಗೆ ಇದರಲ್ಲಿ ಪ್ರೇಮಾಂಕುರಗೊಂಡು ವಿಶೇಷ ಅಭಿಮಾನ ಶ್ರದ್ಧೆಗಳಿಂದ ಬರುತ್ತಿರುವವರು ನಮ್ಮ ಕಮ್ಮಟಿಗರ ಪೀಳಿಗೆಯನ್ನು ಬೆಳೆಸುತ್ತಿದ್ದಾರೆ. ಒಮ್ಮೆ ಬ್ಯಾಂಕುಗಳ ಅಧಿಕೃತ ಪ್ರತಿನಿಧಿಗಳಾಗಿ ಬಂದು ಭಾಗವಹಿಸಿದವರು ಆಮೇಲೆ ಇದರ ಶಾಶ್ವತ ಪ್ರತಿನಿಧಿಗಳಾಗಿ ಪರಿಣಮಿಸುತ್ತಿದ್ದಾರೆ. ಈ ಕಮ್ಮಟದಲ್ಲಿ ಒಟ್ಟು ಇಪ್ಪತ್ಮೂರು ಪ್ರಬಂಧಗಳು ಮಂಡಿತವಾಗಿ ಚರ್ಚೆಗೆ ಒಳಪಟ್ಟುವು ; ಎರಡು ಇಂಗ್ಲಿಷ್ ಲೇಖನಗಳ ಅನುವಾದ ಕಾರ್ಯ ನಡೆಯಿತು. ಹಲವಾರು ಹೊಸ ಪಾರಿಭಾಷಿಕ ಪದಗಳು ಟಂಕನಗೊಂಡವು. ಭಿನ್ನಕ ಬಡ್ಡಿದರ, ಸಾಲ ವಸೂಲಾತಿ, ಸಮಗ್ರ ಗ್ರಾಮೀಣ ಅಭಿವೃದ್ಧಿ, ಗ್ರಾಹಕ ಸಮಾಲೋಚನಾ ಸಭೆ ಮುಂತಾದವುಗಳಿಂದ ಹಿಡಿದು ಅಂತರರಾಷ್ಟ್ರೀಯ ಹಣ ನಿಧಿ, ಅನಿವಾಸಿ ಖಾತೆಗಳು, ಕಾಂತೀಯ ಮಸಿ ಲಿಪಿ ಗ್ರಹಣ, ವಿದ್ಯುನ್ಮಾನ ಬ್ಯಾಂಕಿಂಗು, ಹಕ್ಕು ಪತ್ರಗಳ ನಿಕ್ಷೇಪದ ಅಡಮಾನ, ಬ್ಯಾಂಕ್ ಗೃಹಪತ್ರಿಕೆಗಳು, ಬ್ಯಾಂಕ್ ಮನೆವಾರ್ತೆ, ಬ್ಯಾಂಕುಗಳಲ್ಲಿ ವಂಚನೆಗಳು, ಸಹಕಾರಿ ರಂಗದ ಬ್ಯಾಂಕುಗಳ ಸಾಲ ವಸೂಲಾತಿ ಮುಂತಾದವುಗಳ ವರೆಗೆ ಬ್ಯಾಂಕಿಂಗಿನ ವಿಸ್ತೃತ ವಲಯದ ಮಾನಸಿಕ ಪ್ರವಾಸಕಥನವಾಗಿ ಪರಿಣಮಿಸಿತು, ಈ ಕಮ್ಮಟ. ಸೂಕ್ಷ್ಮತಮ ಚಿಂತನ ಅಭಿವ್ಯಕ್ತಿಗಳಿಗೆ ಕನ್ನಡ ಭಾಷೆಯನ್ನು ಒಗ್ಗಿಸುವುದರ ಜೊತೆಗೆ ಬ್ಯಾಂಕಿಂಗಿನ ಇತ್ತೀಚಿನ ಪ್ರವೃತ್ತಿಗಳ ಪರಿಚಯ ನೀಡುವಲ್ಲಿ ಬ್ಯಾಂಕಿಂಗ್ ಕಮ್ಮಟ ಯಶಸ್ಸು ಗಳಿಸಿದೆಯೆನ್ನಬೇಕು.

ಸಹಚಿಂತನ, ಸಹಜೀವನ ಕುರಿತಂತೆ ಸಾರ್ಥಕ ಪ್ರಯೋಗ ನಡಸುತ್ತ ಬರುತ್ತಿರುವ ಬ್ಯಾಂಕಿಂಗ್ ಕಮ್ಮಟಕ್ಕೆ ಇನ್ನೂ ಒಂದು ಮುಖವುಂಟು. ಚಿಂತನ, ಭಾಷಣ, ಲೇಖನ ಇವು ಬುದ್ಧಿಗಮ್ಯವಾದ ವ್ಯಾಪಾರಗಳು. ಭಾಷೆ ಬಹಿರ್ಮುಖಿ ವ್ಯಾಪಾರಗಳೇ ಅಲ್ಲದೆ ಅಂತರ್ಮುಖಿ ವ್ಯಾಪಾರಗಳ ಅಭಿವ್ಯಕ್ತಿಯ ಮಾಧ್ಯಮವೂ ಹೌದು. ಸೃಜನಾತ್ಮಕ ಸಾಹಿತ್ಯಾಭ್ಯಾಸದಿಂದ ವೈಚಾರಿಕ ಸಾಹಿತ್ಯ ರಚನೆಗೆ ವಿಶೇಷ ಪ್ರಯೋಜನವುಂಟು. ವಿಚಾರ ಸಾಹಿತ್ಯ ರಚನೆಯಲ್ಲಿ ನಿರತರಾಗಬಯಸುವವರು ಸೃಜನಶೀಲ ಸಾಹಿತ್ಯವನ್ನು ಅಲ್ಲಗಳೆಯತಕ್ಕದ್ದಲ್ಲ, ಅಭಿವ್ಯಕ್ತಿಯ ಸಾಧ್ಯತೆಗಳನ್ನು ತೆರೆದು ತೋರುವಂಥದು ಸೃಜನಾತ್ಮಕ ಸಾಹಿತ್ಯ. ವಿಚಾರ ಸಾಹಿತ್ಯವಾದರೂ ರಂಜನೆಯ ಗುಣದಿಂದ ವಂಚಿತವಾಗಲಾರದು, ಆಗಬಾರದು, ಈ ಕಾರಣದಿಂದಾಗಿ ಕಮ್ಮಟದ ಭಾಗಿಗಳ ಪ್ರತಿಭಾ ಪ್ರದರ್ಶನಕ್ಕೂ ಕಮ್ಮಟದಲ್ಲಿ ಅವಕಾಶವುಂಟು. ಆಶು ಭಾಷಣ, ರಸ ಪ್ರಶ್ನೆ ಇತ್ಯಾದಿ ಕಾರ್ಯಕ್ರಮಗಳನ್ನು ಏರ್ಪಡಿಸುವುದರ ಉದ್ದೇಶವಿದು. ಕವಿಗಳು ಸಮಾಜದ ಅಂತಃಕರಣದ ಮೊನೆಗಳು ಎಂದು ಹೇಳುವುದುಂಟು. ಚಿಂತನಪರ ಪ್ರಬಂಧಕಾರನಿಗೂ ಕವಿಯ ಸೂಕ್ಷ್ಮವೇದಿ ಗುಣ ಅತ್ಯವಶ್ಯ. ಕಮ್ಮಟಿಗರ ಹಾಗೂ ಶೃಂಗೇರಿಯ ಕಾವ್ಯಪ್ರತಿಭೆಗೆ ಈ ಬಾರಿ ಒಂದು ಸದವಕಾಶ ಪ್ರಾಪ್ತವಾಯಿತು. ಕಮ್ಮಟದ ಅಂಗವಾಗಿ ಏರ್ಪಡಿಸಿದ್ದ ಕವಿಗೋಷ್ಠಿಯಲ್ಲಿ ಅನೇಕ ಕಮ್ಮಟಿಗರೂ ಶೃಂಗೇರಿಯ ಕವಿಗಳೂ

ತಂತಷ್ಟು ಕವಿತೆಗಳನ್ನು ವಾಚನಮಾಡಿದ್ದೊಂದು ವಿಶೇಷ. ಅತ್ಯಂತ ಉದ್ದೀಪನಕಾರಿಯಾಗಿದ್ದ ಈ ಗೋಷ್ಠಿ ಶೃಂಗೇರಿಯಲ್ಲಿ ಬ್ಯಾಂಕಿಂಗ್ ಕಮ್ಮಟಕ್ಕೆ ಮೂಡಿದ ಒಂದು ಹೊಸ ಟಿಸಿಲು ಎನ್ನಬಹುದು. ಆರು ದಿನಗಳ ಕಾಲಪರಿಮಿತಿಯಲ್ಲಿ ಕಮ್ಮಟಿಗರ ಭಾವಲೋಕ, ಚಿಂತನ ಲೋಕಗಳ ವಿಸ್ತರಣೆಗೆ ಸಾಧ್ಯವಾದ್ದನ್ನೆಲ್ಲ ಕಮ್ಮಟ ಮಾಡಿತೆಂಬುದೂ, ಇದರಲ್ಲಿ ಶೃಂಗೇರಿಯ ಸಹೃದಯ ಬಂಧುಗಳು ಮನಃಪೂರ್ವಕವಾಗಿ ಸಹಕಾರ ನೀಡಿದರೆಂಬುದೂ ಉಲ್ಲೇಖಿಸಬೇಕಾದ ಸಂಗತಿಗಳು.

## ರಿಸರ್ವ್ ಬ್ಯಾಂಕಿನ ಉದರಿ ನೀತಿ

ಪ್ರಸಕ್ತ ಹಣಕಾಸು ವರ್ಷದ (1986-87) ಮೊದಲ ಅರ್ಧ ಭಾಗಕ್ಕೆ ಸಂಬಂಧಿಸಿದಂತೆ ರಿಸರ್ವ್ ಬ್ಯಾಂಕ್ ಪ್ರಕಟಿಸಿರುವ ಉದರಿ ನೀತಿಯಲ್ಲಿ ಹಿಂದಿನ ನೀತಿಯಿಂದ ಹೆಚ್ಚಿನ ಬದಲಾವಣೆಗಳೇನೂ ಇಲ್ಲ. ಬ್ಯಾಂಕುಗಳ ನಗದು ಮೀಸಲು, ಹೆಚ್ಚುವರಿ ಠೇವಣಿಗಳ ಮೇಲೆ ಅವು ಇಡಬೇಕಾದ ಅಧಿಕ ನಗದು ಮೀಸಲು, ಪರಿನಿಯತ ದ್ರವತ್ವ ಅನುಪಾತ ಇವು ಹಿಂದಿನ ಮಟ್ಟದಲ್ಲೇ ಮುಂದುವರಿಯುತ್ತವೆ. ನಗದು ಮೀಸಲನ್ನು ಹೆಚ್ಚಿನ ಮಟ್ಟದಲ್ಲಿ ನಿಗದಿಪಡಿಸುವುದರ ಉದ್ದೇಶವೆಂದರೆ ಬ್ಯಾಂಕುಗಳು ಹೆಚ್ಚು ಉದರಿ ನಿರ್ಮಿಸಲಾಗದಂತೆ ಮಾಡುವುದು. ಬ್ಯಾಂಕುಗಳು ಸದ್ಯದಲ್ಲಿ ತಮ್ಮ ಠೇವಣಿಗಳಲ್ಲಿ ಒಟ್ಟು ಶೇ. 19ರಷ್ಟನ್ನು ಈ ರೀತಿ ಇಡಬೇಕಾಗಿದೆ. ಇದಲ್ಲದೆ ಶೇ. 37ರಷ್ಟನ್ನು ಅವು ಸರ್ಕಾರಿ ಪ್ರತಿಭೂತಿಗಳೇ (ಸೆಕ್ಯೂರಿಟಿ) ಮುಂತಾದವುಗಳಲ್ಲಿ ವಿನಿಯೋಜಿಸಬೇಕು. ಹೀಗೆ ಒಟ್ಟಿನಲ್ಲಿ ಶೇ. 56 ರಷ್ಟು ನಿಧಿಗಳು ಮುಂಗಡ ನೀಡಲು ಬ್ಯಾಂಕುಗಳಿಗೆ ಒದಗದಂತಾಗುತ್ತದೆ. ಮೇಲೆ ಹೇಳಿದವುಗಳಲ್ಲಿ ಎರಡನೆಯದಾದ ಪರಿನಿಯತ ದ್ರವತ್ವ ಅನುಪಾತದ ನಿಯಮದ ಮೂಲಕ ಬ್ಯಾಂಕುಗಳು ಸರ್ಕಾರದ ಸಾಲ ಪತ್ರಗಳಿಗೆ ಕಡ್ಡಾಯವಾಗಿ ಹಣ ನೀಡಬೇಕಾಗುತ್ತದೆ. ಬ್ಯಾಂಕುಗಳ ಉದರಿ ನಿರ್ಮಾಣದ ಸಾಮರ್ಥ್ಯ ಇಷ್ಟರ ಮಟ್ಟಿಗೆ ಮೊಟಕಾಗುತ್ತಿದೆ.

ಇವೆಲ್ಲ ಕಳೆದ ವರ್ಷ ರಿಸರ್ವ್ ಬ್ಯಾಂಕ್ ಪ್ರಕಟಿಸಿದ ಉದರಿ ನೀತಿಯ ಅಂಶಗಳೇ. ಈ ವರ್ಷದ ವಿಶೇಷವೆಂದರೆ, ಈ ನೀತಿಯನ್ನು ಹಿಂದಿನದಕ್ಕಿಂತ ಹೆಚ್ಚು ಕಟ್ಟುನಿಟ್ಟಾಗಿ ಜಾರಿಗೆ ತರಲು ರಿಸರ್ವ್ ಬ್ಯಾಂಕ್ ಕೈಗೊಂಡಿರುವ ಸಂಕಲ್ಪ. ಕಳೆದ ವರ್ಷ ಪರಿನಿಯತ ದ್ರವತ್ವ ಅನುಪಾತ ನಿಯಮವನ್ನು ಸ್ವಲ್ಪಮಟ್ಟಿಗೆ ಸಡಿಲಗೊಳಿಸಲು ಅವಕಾಶವಿತ್ತು. ಇದರಲ್ಲಿ ಶೇ. 4ರ ವರೆಗೂ ವಿನಾಯತಿ ನೀಡಲಾಗುತ್ತಿತ್ತು. ಬ್ಯಾಂಕುಗಳಿಗೆ ಈ ಅನುಪಾತವನ್ನು ಸಾಧಿಸಲು ಕಷ್ಟವೆನಿಸಬಹುದಾದ ಪರಿಸ್ಥಿತಿಯಲ್ಲಿ ಅವಕ್ಕೆ ಈ ವಿನಾಯತಿ ದೊರಕುತ್ತಿತ್ತು. ಆದರೆ ಈಗ ಈ ವಿನಾಯತಿಯ ಮಿತಿಯನ್ನು ಕ್ರಮೇಣ ತೆಗೆದು ಹಾಕಲಾಗುತ್ತದೆ. ಅಕ್ಟೋಬರ್ 11ರ ಅನಂತರ ಯಾವ ರಿಯಾಯಿತಿಯೂ ಇರುವುದಿಲ್ಲ. ಬ್ಯಾಂಕು ಸಾಧಿಸಬೇಕಾದ ಪರಿನಿಯತ (ಸ್ಟ್ಯಾಚ್ಯುಟರಿ) ದ್ರವತ್ವ (ಲಿಕ್ವಿಡಿಟಿ) ಅನುಪಾತದಲ್ಲಿ (ರೇಷಿಯೋ) ಸ್ವಲ್ಪ ಕಡಿಮೆಯಾದರೂ ಅದು ದಂಡ ತೆರಬೇಕಾಗುತ್ತದೆ. ಒಂದು ನಿಯಮ ಮಾಡಿದ ಮೇಲೆ ಅದನ್ನು ಮುರಿಯಲು ದಾರಿಮಾಡಿ ಕೊಡುವುದು ಸರಿಯಲ್ಲವೆಂಬುದು ನಿಜ. ರಿಸರ್ವ್ ಬ್ಯಾಂಕಿನ ಕಟ್ಟುನಿಟ್ಟು ಈ ದೃಷ್ಟಿಯಿಂದ ಸಹಜವೇ. ಬ್ಯಾಂಕುಗಳ ಠೇವಣಿ ಹಾಗೂ ಉದರಿ ಪರಿಸ್ಥಿತಿಯ ಎಲ್ಲ ಅಂಶಗಳನ್ನೂ ಪರಿಶೀಲಿಸಿಯೇ ರಿಸರ್ವ್ ಬ್ಯಾಂಕು ಈ ತೀರ್ಮಾನಕ್ಕೆ ಬಂದಿದೆಯೆಂದು ನಿರೀಕ್ಷಿಸಬಹುದಾಗಿದೆ.

ರಿಸರ್ವ್ ಬ್ಯಾಂಕಿನ ಈ ಕಟ್ಟುಪಾಡು ದೇಶದ ಹಣದುಬ್ಬರ ಪರಿಸ್ಥಿತಿಯ ದ್ಯೋತಕವೆಂದೂ ಭಾವಿಸಬಹುದಾಗಿದೆ. ಬೆಲೆಗಳು ಇನ್ನೂ ಸಂಪೂರ್ಣವಾಗಿ ಹತೋಟಿಗೆ ಬಂದಿಲ್ಲವಷ್ಟೇ ಅಲ್ಲ, ಈಚೆಗೆ ಅವು ಮತ್ತೆ ಏರುವ ಪ್ರವೃತ್ತಿ ತೋರುತ್ತಿವೆ. ಕಳೆದ ವರ್ಷ ಮಳೆ ಬೆಳೆ ಎಲ್ಲೆಲ್ಲೂ ಸಮರ್ಪಕವಾಗಿಲ್ಲದಿದ್ದರೂ ಗೋದಿ ಹಾಗೂ ಅಕ್ಕಿಯ ಕಣಜಗಳು ತುಂಬಿವೆ. ಸರ್ಕಾರದ ಅಭಿಕರಣಗಳ ದಾಸ್ತಾನು ಮಳಿಗೆಗಳ ಹೊಟ್ಟೆಗಳು ಬಿರಿಯುತ್ತಿವೆ. ಅಕ್ಕಿ ಗೋದಿ ಇತ್ಯಾದಿಗಳ ಸಂಗ್ರಹಣೆಗಾಗಿ ಬ್ಯಾಂಕುಗಳು ಮುಂಗಡ ನೀಡಬೇಕಾಗಿದೆಯಾದರೂ ರಿಸರ್ವ್ ಬ್ಯಾಂಕ್ ವಿಧಿಸಿರುವ ಮೀಸಲು ಅನುಪಾತಗಳಿಂದ ಬ್ಯಾಂಕ್ ಕಲಾಪಗಳಿಗೆ ಬಾಧಕವೇನೂ ಆಗದೆಂಬುದು ರಿಸರ್ವ್ ಬ್ಯಾಂಕ್ ಅನಿಸಿಕೆ. ಬೆಲೆಗಳ ಏರಿಕೆಯ ಪ್ರವೃತ್ತಿಯನ್ನು ತಡೆಗಟ್ಟಬೇಕೆಂಬುದು ನಿರ್ವಿವಾದ. ಬ್ಯಾಂಕುಗಳ ಮೇಲೆ ಉದರಿ ನಿರ್ಬಂಧ ವಿಧಿಸುವಾಗ, ಸಹಜವಾಗಿ ವಹಿವಾಟುಗಳಲ್ಲಿ ಆಗುವ ಏರಿಕೆಗೆ ಅಗತ್ಯವಾದಷ್ಟನ್ನು ನೀಡಲು ಬ್ಯಾಂಕುಗಳಿಗೆ ಅವಕಾಶವಿರುವಂತೆ ನೋಡಿಕೊಂಡು, ಅದಕ್ಕಿಂತ ಹೆಚ್ಚಿನದನ್ನು ತಡೆಹಿಡಿಯುವಂತೆ ರಿಸರ್ವ್ ಬ್ಯಾಂಕು ನೀತಿ ರೂಪಿಸಬೇಕು. ಉತ್ಪಾದನೆ, ಬೇಡಿಕೆ, ಪೂರೈಕೆ, ಬೆಲೆಗಳ ಪ್ರವೃತ್ತಿ, ಹಣದ ಒದಗಣೆ ಇತ್ಯಾದಿ ಎಲ್ಲ ಆರ್ಥಿಕ ಸ್ಥಿತಿಗತಿಗಳನ್ನು ಪರಿಗಣಿಸಿ, ಸರ್ಕಾರದ ಧೋರಣೆ ಏನು ಎಂಬುದನ್ನೂ ಅರಿತು ಅದು ಈ ಕ್ರಮ ಕೈಗೊಳ್ಳಬೇಕಾಗುತ್ತದೆ. ದೇಶದಲ್ಲಿ ಒಟ್ಟು ಹಣ ವಾರ್ಷಿಕವಾಗಿ ಶೇ. 17.2ರ ಪ್ರಮಾಣದಲ್ಲಿ ಏರುತ್ತದೆ. ಇದೇ ಪ್ರಮಾಣದಲ್ಲಿ ಅದರ ಏರಿಕೆ ಮುಂದುವರಿಯುವಂತೆ ನೋಡಿಕೊಂಡರೆ ಸಾಕು. ಇದನ್ನು ಮೀರಿದರೆ ಅಪಾಯ ಎಂಬುದು ರಿಸರ್ವ್ ಬ್ಯಾಂಕ್ ಭಾವನೆ. ಆರ್ಥಿಕ ಬೆಳವಣಿಗೆಯ ಅಗತ್ಯವನ್ನು ಪೂರೈಸಲು ಇಷ್ಟು ಸಾಕೆಂದು ಅದು ತೀರ್ಮಾನಿಸಿದೆ. ಬ್ಯಾಂಕ್ ಠೇವಣಿಗಳ ಮೊಬಲಗು ಹಿಂದಿನ ವರ್ಷದ್ದಕ್ಕಿಂತ ಶೇ. 17.5ರಷ್ಟು ಅಧಿಕವಾಗುವುದೆಂದು ನಿರೀಕ್ಷಿಸಲಾಗಿದೆ. ಬ್ಯಾಂಕುಗಳು ತಮ್ಮ ಅಧಿಕ ಉದರಿ ಬೇಡಿಕೆಯನ್ನು ಇಷ್ಟರಿಂದ ಪೂರೈಸಲು ಸಾಧ್ಯವೆಂದು ರಿಸರ್ವ್ ಬ್ಯಾಂಕ್ ಅನಿಸಿಕೆ. ಅಧಿಕ ನಗದು ಮೀಸಲು, ಪರಿನಿಯತ ದ್ರವತ್ವ ಅನುಪಾತ—ಇವಕ್ಕಾಗಿ ಹಣವನ್ನು ತೆಗೆದಿಟ್ಟ ಮೇಲೂ ಸುಮಾರು ರೂ 2,300 ಕೋಟಿಯಷ್ಟು ಹಣ ಈ ವರ್ಷದ ಮೊದಲ ಆರು ತಿಂಗಳಲ್ಲಿ ಮುಂಗಡಗಳಿಗಾಗಿ ಬ್ಯಾಂಕುಗಳಿಗೆ ಲಭ್ಯವಿರುತ್ತದೆ. ಇಷ್ಟು ಸಾಕು ಎಂದು ರಿಸರ್ವ್ ಬ್ಯಾಂಕ್ ಅಭಿಪ್ರಾಯ. ಆದ್ಯತಾ ವಲಯಗಳಿಗೆ ಬ್ಯಾಂಕುಗಳು ಕಡ್ಡಾಯವಾಗಿ ಶೇ. 40ರಷ್ಟು ಉದರಿ ನೀಡಬೇಕೆಂಬ ನಿಯಮವುಂಟು. ಬ್ಯಾಂಕುಗಳು ಈಗಾಗಲೇ ಈ ಗುರಿ ಮೀರಿಬಿಟ್ಟಿವೆ. ಆದ್ದರಿಂದ ಹೆಚ್ಚುವರಿ ಠೇವಣಿಗಳು ಇತರ ಮುಂಗಡಗಳಿಗೆ ಲಭ್ಯವಿರುತ್ತವೆಯೆನ್ನಬಹುದು.

ಪರಿನಿಯತ ದ್ರವತ್ವ ಅನುಪಾತವನ್ನು ಕಟ್ಟುನಿಟ್ಟಾಗಿ ಜಾರಿಗೆ ತರುವುದರ ಜೊತೆಗೆ ಕೆಲವು ನಿಟ್ಟುಗಳಲ್ಲಿ ರಿಸರ್ವ್ ಬ್ಯಾಂಕು ಸ್ವಲ್ಪ ಉದಾರವಾದ ಕ್ರಮಗಳನ್ನು ಜಾರಿಗೆ ತಂದಿದೆ. ಬ್ಯಾಂಕುಗಳು ಉದರಿ ನೀಡಲು ರಿಸರ್ವ್ ಬ್ಯಾಂಕಿನ ಅನುಮತಿ ಅಗತ್ಯವೆನಿಸುವ ಕನಿಷ್ಠ ಮಿತಿಯನ್ನು ಹೆಚ್ಚಿಸಿರುವುದು, ತಾತ್ಕಾಲಿಕ ಸಾಲದ ಮಿತಿಯ ವಿಸ್ತರಣೆ, ಕೆಲವು ಸರಕುಗಳಮೇಲೆ ನೀಡಬಹುದಾದ ಮುಂಗಡದ ಪ್ರಮಾಣದ ಏರಿಕೆ, ಮತ್ತೆ ಕೆಲವು ಸರಕುಗಳ ಮೇಲೆ ಮುಂಗಡ ನೀಡಲು ಇದ್ದ ನಿರ್ಬಂಧದ ರದ್ದು—ಇವು ಕೆಲವು ಸಡಿಲಿಕೆಗಳು. ತಾಜಾ ವಹಿವಾಟುಗಳಿಗೆ ತೊಂದರೆಯಾಗದಂತೆ, ಪೂರೈಕೆ ಅಧಿಕವಿರುವ ಸರಕುಗಳು ಚಾಲೂ ಆಗುವಂತೆ ಮಾಡಲು ರಿಸರ್ವ್ ಬ್ಯಾಂಕ್ ಈ ಧೋರಣೆ ತಳೆದಿದೆಯೆನ್ನಬಹುದು.

ಆದರೆ ನಿರಾಶೆಯ ಸಂಗತಿಯೆಂದರೆ, ಬಡ್ಡಿ ದರಗಳನ್ನು ವಿಮರ್ಶಿಸಲಾಗದಿರುವುದು. ಭಿನ್ನಕ ಬಡ್ಡಿ ದರ, ಆದ್ಯತಾ ವಲಯಕ್ಕೆ ಸಾಲ ನೀಡಿಕೆ, ಸಾಮಾಜಿಕ ಬ್ಯಾಂಕಿಂಗ್ ಮುಂತಾದ ನೀತಿಗಳಿಂದ ಬ್ಯಾಂಕುಗಳ ಲಾಭದ ಅಂತರ ಕುಗ್ಗಿದೆ. ಬಡ್ಡಿ ದರಗಳನ್ನು ವೈಜ್ಞಾನಿಕವಾಗಿ ನಿರ್ಧರಿಸುವ ಅಗತ್ಯ ಕಂಡುಬಂದಿದೆ. ಈ ನಿಟ್ಟಿನಲ್ಲಿ ರಿಸರ್ವ್ ಬ್ಯಾಂಕ್ ಏನೂ ಕ್ರಮ ತೆಗೆದುಕೊಳ್ಳದಿರುವುದು ಅನೇಕರ ಗಮನ ಸೆಳೆದಿದೆ.

## ಬ್ಯಾಂಕುಗಳ ಲಾಭಪ್ರದತೆ

ಬ್ಯಾಂಕುಗಳ ಲಾಭಪ್ರದತೆ ಇಂದಿನ ಒಂದು ಮುಖ್ಯ ಪ್ರಶ್ನೆ. ರಾಷ್ಟ್ರೀಕರಣದ ಫಲವಾಗಿ ವ್ಯಾಪಕವಾಗಿರುವ ಶಾಖಾ ವ್ಯವಸ್ಥೆ, ಹೊಸದಾಗಿ ರೂಪುಗೊಂಡು ತ್ರಿವಿಕ್ರಮಾಕಾರ ತಾಳಿರುವ ಸಾಮಾಜಿಕ ಬ್ಯಾಂಕಿಂಗ್, ಆದ್ಯತಾ ವಲಯಕ್ಕೆ ಮುಂಗಡ ನೀಡಿಕೆ, ಭಿನ್ನಕ ಬಡ್ಡಿ ದರ, ಸಾಲ ಮೇಳ ಇತ್ಯಾದಿ ಪ್ರವೃತ್ತಿಗಳನ್ನು ತಾಳಿಕೊಂಡು ಬೆಳೆಯುವ ಜೀವ ಶಕ್ತಿ ನಮ್ಮ ಬ್ಯಾಂಕಿಂಗ್ ವ್ಯವಸ್ಥೆಗೆ ಇದೆಯೆ ಎಂಬುದನ್ನು ತೀವ್ರವಾಗಿ ಪರಿಗಣಿಸಬೇಕಾದ ಕಾಲ ಈಗ ಬಂದಿದೆ. ಭಾರತೀಯ ಸ್ಟೇಟ್ ಬ್ಯಾಂಕಿನ ವಾರ್ಷಿಕ ಅಧಿವೇಶನದಲ್ಲಿ ಅದರ ಅಧ್ಯಕ್ಷರು ನೀಡಿದ ಭಾಷಣದಲ್ಲಿ ಈ ಬಗ್ಗೆ ವ್ಯಕ್ತಪಡಿಸಲಾಗಿರುವ ಕೆಲವು ಆತಂಕಗಳು ನಿರಾಶಾವಾದದ ಅಪಶ್ರುತಿಯಲ್ಲ, ಅಪಾಯದ ಚಿಹ್ನೆ. ಮುಂದಿನ ಕೆಲವು ವರ್ಷಗಳ ಕಾಲ ಭಾರತೀಯ ಬ್ಯಾಂಕಿಂಗ್ ವ್ಯವಸ್ಥೆಯ ಲಾಭಪ್ರದತೆ ಕುಗ್ಗುತ್ತ ಸಾಗುವುದೆಂದು ಅವರು ಹೇಳಿದ್ದಾರೆ. ಇದರ ಬಗ್ಗೆ ಕಳೆದ ಕೆಲವು ವರ್ಷಗಳಲ್ಲಿದ್ದದ್ದಕ್ಕಿಂತ ಈ ವರ್ಷದ ಸ್ಥಿತಿ ಸ್ವಲ್ಪ ಸುಧಾರಿಸಿದೆಯೆಂಬ ಭಾವನೆ ಬರುವುದೇನೋ ನಿಜ. ಬ್ಯಾಂಕುಗಳ ನಡುವೆ ಸ್ಪರ್ಧೆ ಇಲ್ಲದಿರುವುದು, ಠೇವಣಿಗಳ ವಿಚಾರದಲ್ಲಿ ಇತರ ಆಕರ್ಷಕ ಸಂಸ್ಥೆಗಳೊಂದಿಗೆ ಸ್ಪರ್ಧಿಸಬೇಕಾದ ಅನಿವಾರ್ಯತೆ ಮುಂತಾದ ಅನೇಕ ಪರಿಸ್ಥಿತಿಗಳಿದ್ದಾಗ್ಯೂ ಈ ವರ್ಷ ಬ್ಯಾಂಕ್ ಠೇವಣಿಗಳು ಗಮನಾರ್ಹವಾಗಿ ಏರುವ ಪ್ರವೃತ್ತಿ ತೋರಿವೆ ಎನ್ನಲಾಗಿದೆ. ಕಳೆದ ವರ್ಷ (1985) ಬ್ಯಾಂಕ್ ಠೇವಣಿಗಳು ರೂ 12,010 ಕೋಟಿಯಷ್ಟು ಅಧಿಕವಾದುವು. ರೂ 83,721 ಕೋಟಿಗೆ ಏರಿದುವು. ಈ ವರ್ಷ ಒಟ್ಟು ಠೇವಣಿಗಳು ರೂ 97,000 ಕೋಟಿ ಆಗಬಹುದು, ರೂ 98,000 ಕೋಟಿಯ ಗಡಿ ಮುಟ್ಟಿದರೂ ಮುಟ್ಟಬಹುದು. ದೇಶದ ಒಳಗೆ ಬ್ಯಾಂಕಿಂಗ್ ಸಂದೇಶ ಹರಿದಿರುವುದು ಇದಕ್ಕೆ ಒಂದು ಕಾರಣ ಎಂದು ಭಾವನೆ. ಈ ವರ್ಷ ಲಾಭಪ್ರದತೆ ಇನ್ನಷ್ಟು ಸುಧಾರಿಸಬಹುದು ಎಂದು ನಿರೀಕ್ಷೆ. ಸರ್ಕಾರ ಈಚೆಗೆ ನೀಡುತ್ತಿರುವ ಸಾಲಗಳ ಮೇಲೆ ಬಡ್ಡಿ ದರಗಳನ್ನು ಗಮನಾರ್ಹವಾಗಿ ಏರಿಸಿರುವುದೂ, ಆಹಾರ ಧಾನ್ಯದ ಮೇಲೆ ನೀಡಿದ ಸಾಲದ ಬಡ್ಡಿ ದರವನ್ನು ಕೂಡ ರಿಸರ್ವ್ ಬ್ಯಾಂಕ್ ಹೆಚ್ಚಿಸಿರುವುದೂ ಬ್ಯಾಂಕುಗಳ ಲಾಭಪ್ರದತೆ ಹಿಗ್ಗಲು ಕಾರಣವೆಂದು ವಾದಿಸಲಾಗಿದೆ. ಬ್ಯಾಂಕುಗಳು ತಮ್ಮ ಸಂಪನ್ಮೂಲಗಳಲ್ಲಿ ಮೂರನೆಯ ಒಂದು ಭಾಗಕ್ಕಿಂತ ಹೆಚ್ಚನ್ನು ಸರ್ಕಾರಿ ಸಾಲ ಪತ್ರಗಳಲ್ಲಿ ತೊಡಗಿಸಬೇಕಾಗಿರುವುದರಿಂದ ಸರ್ಕಾರಿ ಸಾಲಗಳ ಬಡ್ಡಿ ದರ ಏರಿಕೆಯನ್ನು ಬ್ಯಾಂಕುಗಳು ಸ್ವಾಗತಿಸುವುದು ಸಹಜ.

ಆದರೆ ಸರ್ಕಾರಿ ಸಾಲಗಳ ಹಾಗೂ ಆಹಾರಧಾನ್ಯದ ಮೇಲಣ ಮುಂಗಡಗಳ ಬಡ್ಡಿ ದರಗಳ ಏರಿಕೆಯಿಂದ ಲಾಭಪ್ರದತೆಯ ಸಮಸ್ಯೆ ಶಾಶ್ವತವಾಗಿ ಪರಿಹಾರವಾಗುವುದಿಲ್ಲ. ಈ ವರ್ಷವೂ ಬ್ಯಾಂಕುಗಳ ಲಾಭ ಕಡಿಮೆಯಾಗದೆಂಬುದಕ್ಕೆ ಇನ್ನೂ ಕೆಲವು ಕಾರಣಗಳನ್ನು ಸೇರಿಸಬಹುದು, ಬ್ಯಾಂಕು ಕಡ್ಡಾಯವಾಗಿ ಇಡಬೇಕಾದ ನಗದಿನ ಮೇಲೆ ರಿಸರ್ವ್ ಬ್ಯಾಂಕ್ ಬಡ್ಡಿ ದರ ಹೆಚ್ಚಿಸಿರುವುದು, ಬ್ಯಾಂಕ್ ನೌಕರರ ಸಂಬಳಗಳ ಪುನರ್ವಿಮರ್ಶೆಯ ಫಲವಾಗಿ ಅವರಿಗೆ ಬಾಕಿ ಪಾವತಿ ಮಾಡಬೇಕಾಗಿ ಬರುವ ಪರಿಸ್ಥಿತಿ ಇಲ್ಲದಿರುವುದು, ಆದ್ಯತಾ ವಲಯಕ್ಕೆ ನೀಡಬೇಕಾದ ಸಾಲದ ಪ್ರಮಾಣದ ಮಿತಿಯನ್ನು ಬ್ಯಾಂಕುಗಳು ಈಗಾಗಲೇ ತಲಪಿರುವುದು—ಇವೂ ಲಾಭಪ್ರದತೆಯ ಸುಧಾರಣೆಗೆ ಕಾರಣ. ಆದರೆ ಮುಖ್ಯವಾಗಿ ಗಮನಿಸಬೇಕಾದ ವಿಚಾರವಿದು : ಬ್ಯಾಂಕುಗಳು ಯಾವ ಕ್ಷೇತ್ರದಲ್ಲಿ ಕಲಾಪ ನಡಸುತ್ತಿವೆಯೋ ಆ ಕ್ಷೇತ್ರಕ್ಕೆ—ಎಂದರೆ ವಾಣಿಜ್ಯ ಕ್ಷೇತ್ರಕ್ಕೆ—ನೀಡಿದ ಮುಂಗಡಗಳಿಂದ ಹೆಚ್ಚು ಸಂಪಾದನೆಯಾಗುತ್ತಿಲ್ಲ. ಸಾಮಾಜಿಕ ಬ್ಯಾಂಕಿಂಗ್ ದೇಶಕ್ಕೆ ವರವಾಗಿ ಪರಿಣಮಿಸಿಲ್ಲ (ಹಾಗೆಂದಾಗ ಅದರ ಉದ್ದೇಶವನ್ನು ನಾವಿಲ್ಲಿ ಪ್ರಶ್ನಿಸುತ್ತಿಲ್ಲ, ಅದರ ರೀತಿ ರಿವಾಜುಗಳ ಬಗ್ಗೆ ನಮ್ಮ ಆತಂಕ). ಅದು ಬ್ಯಾಂಕುಗಳ ನಿಧಿಗಳ ಮೇಲೆ ಹಾಗೂ ಲಾಭಪ್ರದತೆಯ ಮೇಲೆ ಭಾರಿ ಹೊರೆಯಾಗಿ ಪರಿಣಮಿಸುತ್ತಿದೆ. ಜೊತೆಗೆ ಪರಂಪರಾಗತ ಕೈಗಾರಿಗಳು ಅಸ್ವಸ್ಥಗೊಳ್ಳುತ್ತಿವೆ. ಅಸ್ವಸ್ಥ ಘಟಕಗಳ ಪುನರುಜ್ಜೀವನ ಕಾರ್ಯದ ಕಹಿ ಫಲವನ್ನು ಬ್ಯಾಂಕುಗಳು ಭೋಗಿಸಬೇಕಾಗಿದೆ. ಇದು ವರ್ಷೇ ವರ್ಷೇ ಹೆಚ್ಚು ಹೆಚ್ಚು ಕಹಿಯಾಗುತ್ತಿದೆ. ಠೇವಣಿಗಳ ನಷ್ಟಸಂಭವ ಬೆಳೆಯುತ್ತಿದೆ. ಬ್ಯಾಂಕುಗಳು ನಷ್ಟಕ್ಕಾಗಿ ಹೆಚ್ಚು ಹೆಚ್ಚು ಹಣ ತೆಗೆದಿರಿಸಬೇಕಾಗುತ್ತದೆ. ಕುಗ್ಗುತ್ತಿರುವ ಲಾಭದಿಂದ ಹೆಚ್ಚು ಹೆಚ್ಚು ದೊಡ್ಡ ಭಾಗವನ್ನು ಸಾಮಾಜಿಕ ಬ್ಯಾಂಕಿಂಗಿಗೆ ತೆಗೆದಿರಿಸಬೇಕಾಗುತ್ತದೆ. ಸಾಮಾಜಿಕ ಬ್ಯಾಂಕಿಂಗಿನಿಂದ ನಮ್ಮ ಅರ್ಥವ್ಯವಸ್ಥೆಯ ಜಡವಲಯ ಚೈತನ್ಯದಾಯಕರಾಗಿ ಪರಿಣಮಿಸುತ್ತಿಲ್ಲ. ಫಲಾನುಭವಿಗಳು ಪಡೆದ ಸಾಲವನ್ನು ಮರುಪಾವತಿ ಮಾಡುವ ಸಾಮರ್ಥ್ಯ ಪಡೆದಿಲ್ಲ, ಆ ಇಚ್ಛೆಯನ್ನೂ ಹೊಂದಿಲ್ಲ. ಇದರಿಂದ ನಷ್ಟದ ಕ್ಷೇತ್ರ ವಿಸ್ತರಿಸುತ್ತ ಹೋಗುತ್ತದೆ.

ನಾನಾ ವಲಯಗಳಿಂದ ಸಾಲ ವಸೂಲಾತಿ ಕುಗ್ಗಿದಂತೆ ಬ್ಯಾಂಕುಗಳ ಸಂಪನ್ಮೂಲಗಳು ಕ್ಷೀಣಿಸುವುದು ಅನಿವಾರ್ಯ, ಠೇವಣಿಗಳನ್ನು ಗಮನಾರ್ಹವಾಗಿ ಹೆಚ್ಚಿಸುವುದೊಂದೇ ಉಪಾಯ. ಆದರೆ ಇತರ ವಲಯಗಳ ಸ್ಪರ್ಧೆಯಿಂದಾಗಿ ಠೇವಣಿಗಳು ಬೇಕೆನಿಸುವಷ್ಟು ಹೆಚ್ಚಲಾರವು. ಠೇವಣಿಗಳ ಮೇಲೆ ಬಡ್ಡಿ ಹೆಚ್ಚಿಸುವ ಅಧಿಕಾರ ಬ್ಯಾಂಕುಗಳಿಗೆ ಇಲ್ಲ. ಈಗಾಗಲೇ ಬ್ಯಾಂಕುಗಳು ನೀಡುತ್ತಿರುವ ಬಡ್ಡಿ ದರಗಳು ಅವಕ್ಕೆ ಭಾರವಾಗಿವೆ. ಒಂದು ಕಾಲದಲ್ಲಿ ಹೆಚ್ಚು ಬಡ್ಡಿ ದರದ ನಿಡು ಅವಧಿ ಠೇವಣಿಗಳ ಪ್ರಮಾಣ ಕಡಿಮೆಯಿತ್ತು. 1969 ರಲ್ಲಿ ಐದು ವರ್ಷಗಳಿಗಿಂತ ಹೆಚ್ಚಿನ ಅವಧಿಯ—ಅಧಿಕ ಬಡ್ಡಿ ದರದ—ಠೇವಣಿಗಳ ಪ್ರಮಾಣ ಒಟ್ಟು ಠೇವಣಿಗಳ ಮೊಬಲಗಿನಲ್ಲಿ ಕೇವಲ ಶೇ 6.2ರಷ್ಟಿತ್ತು. 1981ರಲ್ಲಿ ಇದು 61.8%ಕ್ಕೆ ಏರಿತ್ತು. ಬ್ಯಾಂಕುಗಳ ಒಟ್ಟು ಠೇವಣಿಗಳಲ್ಲಿ ಅಧಿಕ ಬಡ್ಡಿ ದರಗಳ ಠೇವಣಿಗಳ ಭಾಗ ಹೆಚ್ಚಾಗಿದೆ ಎಂದು ಸುಖಮಯ ಚಕ್ರವರ್ತಿ ಸಮಿತಿಯ ವರದಿಯೂ ಹೇಳುತ್ತದೆ. ಆದ್ದರಿಂದ ಬ್ಯಾಂಕುಗಳು ಅಧಿಕ ಬಡ್ಡಿ ತೆರುವ, ಕಡಿಮೆ ಬಡ್ಡಿ ಪಡೆಯುವ ನಷ್ಟಜೀವಿಗಳಾಗಿ ಪರಿಣಮಿಸಿರುವುದರಲ್ಲಿ ಆಶ್ಚರ್ಯವಿಲ್ಲ.

ಆದ್ದರಿಂದ ಬ್ಯಾಂಕುಗಳು ಸಹಾಯಧನ ನೀಡುವ ಸಂಸ್ಥೆಗಳ ಪಾತ್ರ ವಹಿಸುವುದನ್ನು ನಿಯಂತ್ರಿಸಬೇಕು. ಎಂದರೆ ಸಾಮಾಜಿಕ ಬ್ಯಾಂಕಿಂಗ್ ಬೇಡವೆಂದಲ್ಲ. ಆದರೆ ಬ್ಯಾಂಕುಗಳು ಅಕ್ಷಯ ಪಾತ್ರೆಗಳಲ್ಲ. ಇವು ನೀಡುವ ಸಹಾಯಕ್ಕೆ ಆಕಾಶವೇ ಮಿತಿ ಎಂಬ ಕಲ್ಪನೆ

ಅಪಾಯಕಾರಿ. ಬ್ಯಾಂಕುಗಳು ನೀಡುವ ಇಂಥ ಸಾಲಗಳಿಗೂ ಇವುಗಳ ಸಾರ್ಥಕತೆಗೂ ಮರುಪಾವತಿಗೂ ಸಂಬಂಧ ಏರ್ಪಡಬೇಕು. ಬ್ಯಾಂಕುಗಳು ದಾನ ಸಂಸ್ಥೆಗಳೆಂಬ ಭಾವನೆಯನ್ನು ಬೆಳಸಬಾರದು. ತಾನು ಮಾಡಿದ್ದಕ್ಕೆ ತಾನೇ ಹೊಣೆ ಎಂಬ ಭಾವನೆ ಬ್ಯಾಂಕರನಲ್ಲಿ ಬೆಳೆಯುವಂತೆ ಇಡೀ ವಾತಾವರಣವೇ, ವ್ಯವಸ್ಥೆಯೇ ಬದಲಾಗಬೇಕು. ಬ್ಯಾಂಕುಗಳು ಸರ್ಕಾರದ ಕೈಗೂಸುಗಳಾಗಬಾರದು. ಹವಣರಿತ, ಹೊಣೆಯರಿತ ಲೇಣೆ-ದೇಣೆ, ಸುಯೋಜಿತ ಪ್ರಗತಿ ಮತ್ತು ಬೆಳೆವಣಿಗೆ—ಇದು ಬ್ಯಾಂಕಿಂಗಿನ ತಾರಕವಾಕ್ಯವಾಗಬೇಕು.

## ಗ್ರಾಮೀಣ ಠೇವಣಿ ಸಂಗ್ರಹಣೆ

ಗ್ರಾಮ ಪ್ರದೇಶಗಳಲ್ಲಿ ತೀವ್ರವಾಗಿ ತಮ್ಮ ಜಾಲಗಳನ್ನು ಹಬ್ಬಿಸಿಕೊಳ್ಳುತ್ತಿರುವ ಬ್ಯಾಂಕುಗಳು ಆ ಪ್ರದೇಶಗಳಲ್ಲಿ ವ್ಯಾಪಕವಾಗಿ ಸಾಲ ನೀಡಿಕೆಯಲ್ಲಿ ತೊಡಗಿರುವುದೇನೋ ಸರಿಯೆ. ಆದರೆ ಗ್ರಾಮ ಪ್ರದೇಶಗಳ ಜನರಲ್ಲಿ ಉಳಿತಾಯಪ್ರವೃತ್ತಿ ಬೆಳೆಸುವುದರಲ್ಲಿ, ಅವರ ಉಳಿತಾಯವನ್ನು ಸಂಗ್ರಹಿಸುವುದರಲ್ಲಿ ಅವುಗಳ ಪಾತ್ರವೇನು ?

ಲೋಕಸಭೆಯ ಅಂದಾಜು ಸಮಿತಿ ಈ ಬಗ್ಗೆ ಮಾಡಿರುವ ಟೀಕೆಗಳು ಈ ವಿಚಾರದ ಮೇಲೆ ಬೆಳಕು ಚೆಲ್ಲುತ್ತವೆ. ಅದರ ಟೀಕೆಗಳು ಮುಖ್ಯವಾಗಿ ಭಾರತೀಯ ಸ್ಟೇಟ್ ಬ್ಯಾಂಕಿನ ಠೇವಣಿ ಸಂಗ್ರಹಣೆಯ ಕಾರ್ಯವನ್ನು ದೃಷ್ಟಿಯಲ್ಲಿಟ್ಟುಕೊಂಡು ಮಾಡಿದವಾದರೂ ಎಲ್ಲ ಬ್ಯಾಂಕುಗಳಿಗೂ ಈ ಮಾತುಗಳು ಅನ್ವಯಿಸುತ್ತವೆ. ಠೇವಣಿ ಸಂಗ್ರಹಣೆಗಾಗಿ ಬ್ಯಾಂಕುಗಳು ಹೊಂದಿರುವ ಯೋಜನೆಗಳೆಲ್ಲ ಮುಖ್ಯವಾಗಿ ಪಟ್ಟಣಿಗ ಹಾಗೂ ಉನ್ನತ ವರ್ಗಗಳ ಜನರನ್ನು ದೃಷ್ಟಿಯಲ್ಲಿಟ್ಟುಕೊಂಡು ರೂಪಿಸಿದಂಥವು. ಗ್ರಾಮೀಣ ಜನಕ್ಕೆ ಹೊಂದುವಂಥವು ಇಲ್ಲವೇ ಇಲ್ಲ ಎಂಬುದು ಸಮಿತಿಯ ಅಭಿಪ್ರಾಯ.

ರಿಸರ್ವ್ ಬ್ಯಾಂಕೂ ತನ್ನ ಹೊಣೆಯನ್ನು ಸರಿಯಾಗಿ ನಿರ್ವಹಿಸಿಲ್ಲವೆನ್ನುತ್ತದೆ, ಸಮಿತಿ. ನೂರಕ್ಕೆ ಅರವತ್ತು ಬ್ಯಾಂಕ್ ಶಾಖೆಗಳನ್ನು ಗ್ರಾಮಪ್ರದೇಶದಲ್ಲಿ ತೆರೆಯುವಂತೆ ರಿಸರ್ವ್ ಬ್ಯಾಂಕ್ ಕ್ರಮ ತೆಗೆದುಕೊಂಡಿರುವುದೇನೋ ನಿಜ. ಆದರೆ ಶಾಖೆಗಳನ್ನು ತೆರೆಯುವುದರಿಂದಲೇ ಉಳಿತಾಯ ಹಾಗೂ ಠೇವಣಿ ಸಂಗ್ರಹಣೆ ಸಾಧಿತವಾಗುವುದಿಲ್ಲ. ಉಳಿತಾಯ ಅನುಸ್ಥಾಪಿತ (ಸೇವಿಂಗ್ಸ್-ಓರಿಯೆಂಟೆಡ್) ನವೋನ್ಮೇಷ ಯೋಜನೆಗಳನ್ನು ಬ್ಯಾಂಕ್ ಶಾಖೆಗಳು ಜಾರಿಗೆ ಕೊಡಬೇಕು. ಸಾಕಷ್ಟು ಪ್ರಚಾರ ಮಾಡಬೇಕು. ಮನೆ ಮನೆಗೆ ಹೋಗಿ ಮನ ಒಲಿಸಬೇಕು. ರಿಸರ್ವ್ ಬ್ಯಾಂಕೂ ಸರ್ಕಾರದ ಹಣಕಾಸು ಇಲಾಖೆಯೂ ಇದಕ್ಕೆ ಗಮನ ನೀಡಬೇಕು ಎಂಬುದು ಸಮಿತಿಯ ಸಲಹೆ.

ಗ್ರಾಮ ಪ್ರದೇಶಗಳಲ್ಲಿ ಅಧಿಕ ಠೇವಣಿ ಸಂಗ್ರಹಣೆ ಆಗುತ್ತಿಲ್ಲವಷ್ಟೇ ಅಲ್ಲ, ಗ್ರಾಮೀಣ ಪ್ರದೇಶದಲ್ಲಿ ಉದರಿ-ಠೇವಣಿ ಅನುಪಾತ (ಕ್ರೆಡಿಟ್-ಡಿಪಾಸಿಟ್ ರೇಷಿಯೋ) ಇಳಿಯುತ್ತಿದೆಯೆಂಬುದನ್ನು ಅಂಕಿಗಳು ಸೂಚಿಸುತ್ತವೆ. ಭಾರತೀಯ ಸ್ಟೇಟ್ ಬ್ಯಾಂಕಿಗೆ ಸಂಬಂಧಿಸಿದಂತೆ 1980ರಲ್ಲಿ ಇದು 68.17 ಆಗಿತ್ತು, 1981ರಲ್ಲಿ 65.96ಕ್ಕೆ ಇಳಿಯಿತು. 1982, 1983 ಮತ್ತು 1984ರಲ್ಲಿ ಅನುಕ್ರಮವಾಗಿ ಇದು 63. 38 ; 62. 67 ಮತ್ತು 61. 37 ಆಯಿತು. ನಗರ ಪ್ರದೇಶಗಳಲ್ಲಿ ಇದು ಹೆಚ್ಚುತ್ತಿದೆ (100. 90 ; 104. 33 ; 115. 34 ; 107. 87 ; 100. 07).

ಗ್ರಾಮಪ್ರದೇಶದಲ್ಲಿ ಉದರಿ ನೀಡಿಕೆ ಹೆಚ್ಚುತ್ತಿರುವುದರಿಂದಲೇ ಅಲ್ಲಿ ಉದರಿ-ಠೇವಣಿ ಅನುಪಾತ ಇಳಿಯುತ್ತಿದೆಯೆಂಬುದನ್ನು ಸಮಿತಿ ಒಪ್ಪುವುದಿಲ್ಲ. ಬ್ಯಾಂಕು ಠೇವಣಿ ಸಂಗ್ರಹಣೆಗೆ ಸಮರ್ಪಕ ಅಧೋರಚನೆಯ ನಿರ್ಮಾಣ, ಪ್ರಚಾರ, ಕೈಗಾರಿಕೆಗಳ—ಮುಖ್ಯವಾಗಿ ಕೃಷಿ ಆಧಾರಿತ ಕೈಗಾರಿಕೆಗಳ—ಸ್ಥಾಪನೆ, ಸಾಲ ಪಡೆಯುವ ಪ್ರತಿಯೊಬ್ಬನೂ ಅಂತಿಮವಾಗಿ ಬ್ಯಾಂಕಿನ ನೈಜ ಠೇವಣಿದಾರನಾಗುವಂತೆ ಕ್ರಮ — ಇಂಥ ನಾನಾ ಸಲಹೆಗಳನ್ನು ಸಮಿತಿ ನೀಡಿದೆ. ಬ್ಯಾಂಕುಗಳ ಪರಿಶೀಲನೆಗೆ ಅರ್ಹವಾದ ಸಲಹೆಗಳು ಇವು.


ಹಾರ್ದಿಕ ಶುಭಾಶಯಗಳು

ಯಜಮಾನ್ ಅಂಡ್ ಬ್ರದರ್ಸ್

ಬೆಂಗಳೂರು ರಸ್ತೆ, ಬಳ್ಳಾರಿ

**ಕಾಗದ, ಪುಸ್ತಕ ಹಾಗು ಲೇಖನ ಸಾಮುಗ್ರಿಗಳ ಮಾರಾಟಗಾರರು**

**ಅಧಿಕೃತ ಮಾರಾಟಗಾರರು**

ಮೈಸೂರು ಕಾಗದದ ಕಾರ್ಖಾನೆ

(ಬಳ್ಳಾರಿ, ಧಾರವಾಡ ಹಾಗು ರಾಯಚೂರು ಜಿಲ್ಲೆಗಳಿಗೆ)

- ಕೋರೆಸ್ (ಇಂಡಿಯ) ಲಿಮಿಟೆಡ್
- ಕ್ಯಾಮಲಿನ್ ಪ್ರೈವೇಟ್ ಲಿಮಿಟೆಡ್

**ಅಧಿಕೃತ ದಾಸ್ತಾನುಗಾರರು**

ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್

(ಲೇಖಕ್ ಲೇಖನ ಸಾಮಗ್ರಿಗಳು)

ಶುಭಾಶಯಗಳು



# ಪಾಂಡಿಯನ್ ಏಜೆನ್ಸೀಸ್

ಮತ್ತು

# ಪಾಂಡಿಯನ್ ಪೇಪರ್ ಸ್ಟೋರ್ಸ್

ಹಾಸನ

ಅಂಚೆ ಪೆಟ್ಟಿಗೆ 70 ಹಾಸನ 573 201

## ಭೀಕರ ಬರಗಾಲ ಎದುರಿಸಲು ವ್ಯಾಪಕ ಕಾರ್ಯಕ್ರಮ

# ಉದ್ಯೋಗ ಸೃಷ್ಟಿಯೊಂದಿಗೇ ಗ್ರಾಮೀಣ ಆಸ್ತಿ ನಿರ್ಮಾಣ

ಕರ್ನಾಟಕ ಸಮೃದ್ಧಿಯ ನಾಡು. ಅದು ಇಂದು ತಡೆಯಲಾಗದ, ಮರುಕಳಿಸಿದ ಭೀಕರ ಕ್ಷಾಮದಿಂದ ತತ್ತರಿಸುತ್ತಿದೆ. ನೈಋತ್ಯ ಹಾಗೂ ಈಶಾನ್ಯ ಮಾರುತಗಳ ಸತತ ವೈಫಲ್ಯದಿಂದಾಗಿ, ಈ ಪುಣ್ಯಭೂಮಿ ಕಳೆದ ನಾಲ್ಕು ವರ್ಷಗಳಿಂದ ವಿಪತ್ತಿನ ದವಡೆಯಲ್ಲಿ ಸಿಲುಕಿದೆ. ಇಡೀ ಗ್ರಾಮೀಣ ಬದುಕಿನ ಜೀವನಾಡಿಯನ್ನೇ ತಲ್ಲಣಗೊಳಿಸಿದೆ. ಹೆಚ್ಚೂ ಕಡಿಮೆ ಇಡೀ ರಾಜ್ಯ ಇದರ ಹೊಡೆತಕ್ಕೆ ಸಿಲುಕಿದೆ. ರಾಜ್ಯದ 175 ತಾಲ್ಲೂಕುಗಳಲ್ಲಿ 148 ತಾಲ್ಲೂಕುಗಳು, 27,028 ಹಳ್ಳಿಗಳ ಪೈಕಿ 20,496 ಹಳ್ಳಿಗಳು, 371 ಲಕ್ಷದಲ್ಲಿ 220 ಲಕ್ಷ ಜನತೆ, 150 ಲಕ್ಷದಲ್ಲಿ 110 ಲಕ್ಷ ಜಾನುವಾರು ಸಹಿತ ಪ್ರಕೃತಿಯ ವಿಕೋಪಕ್ಕೆ ಸಿಲುಕಿವೆ. ಬೇಸಾಯ ಕ್ಷೇತ್ರದಲ್ಲಿ ಶೇ. 47ರಷ್ಟು ಮುಂಗಾರು ಬೆಳೆಯ ಪ್ರದೇಶಗಳು ತೊಂದರೆಗೆ ಈಡಾಗಿವೆ; ಇದರ ಫಲವಾಗಿ ಆಹಾರದ ಉತ್ಪಾದನೆಯಲ್ಲಿ ಶೇ. 50ರಷ್ಟು ನಷ್ಟವುಂಟಾಗಿದೆ. ಆದ್ದರಿಂದಲೇ ಸರ್ಕಾರ ಈ ಭೀಕರ ಬರಗಾಲದ ವಿರುದ್ಧ ಸಮರವನ್ನೇ ಸಾರಿದೆ. ಅದು ಅವಿರತವಾಗಿ ಎಲ್ಲ ಕ್ಷೇತ್ರಗಳಲ್ಲಿ ಹೋರಾಟ ನಡೆಸಿದೆ; ಕುಡಿಯುವ ನೀರು, ಆಹಾರ ಧಾನ್ಯ, ಮೇವು ಮುಂತಾದ ಜೀವನಾವಶ್ಯಕತೆಗಳು ಹಾಗೂ ಉದ್ಯೋಗ ಒದಗಿಸಲು ಆದ್ಯ ಗಮನ ನೀಡಿದೆ. ಇದರಿಂದಾಗಿ ಕೊಳವೆ ಬಾವಿಗಳು, ಕೆರೆಗಳು, ನೀರಾವರಿ ನಾಲೆಗಳು, ಗ್ರಾಮ ಸಂಪರ್ಕ ರಸ್ತೆಗಳು ಮತ್ತಿತರ ಶಾಶ್ವತ ಆಸ್ತಿಯೂ ನಿರ್ಮಾಣವಾಗುತ್ತಿವೆ.

**ಕೊಳವೆ ಬಾವಿಗಳು**

ಹಳ್ಳಿಗಳಲ್ಲಿ ಕೊಳವೆ ಬಾವಿಗಳನ್ನು ತೋಡುವ ಕೆಲಸ ಶೀಘ್ರಗತಿಯಲ್ಲಿ ಸಾಗಿದೆ. ಕಳೆದ ನಾಲ್ಕು ವರ್ಷಗಳಲ್ಲಿ 41,000ಕ್ಕೂ ಹೆಚ್ಚು ಕೊಳವೆ ಬಾವಿಗಳನ್ನು ನಿರ್ಮಿಸಲಾಗಿದೆ. ಇದರಿಂದಾಗಿ, ಈವರೆಗೆ ರಾಜ್ಯದಲ್ಲಿ ಈಗ 92,500 ಕೊಳವೆ ಬಾವಿಗಳನ್ನು ನಿರ್ಮಿಸಿದಂತಾಗಿದೆ. ಇದು ಗ್ರಾಮೀಣ ಕರ್ನಾಟಕಕ್ಕೆ ಮಹತ್ವದ ಶಾಶ್ವತ ಆಸ್ತಿಯಾಗಿದೆ.

**ಶಾಶ್ವತ ಆಸ್ತಿ ಮತ್ತು ಗ್ರಾಮೀಣ ಉದ್ಯೋಗ**

ಸರ್ಕಾರದ ನೆರವು ತಾತ್ಕಾಲಿಕ ಸಹಾಯ ಒದಗಿಸುವ ಕ್ರಮ ಮಾತ್ರವಲ್ಲ. ಬರಗಾಲ ಪೀಡಿತ ಪ್ರದೇಶಗಳ ಜನತೆಗೆ ಉದ್ಯೋಗ ಒದಗಿಸುವುದಲ್ಲದೆ ಅವಶ್ಯಕ ಆಸ್ತಿಗಳನ್ನು ನಿರ್ಮಿಸುವ ದೀರ್ಘಕಾಲೀನ ಕ್ರಮಗಳನ್ನು ಸರ್ಕಾರ ಕೈಗೊಂಡಿದೆ.

ಅನೇಕ ರಚನಾತ್ಮಕ ಉದ್ಯೋಗಾವಕಾಶ ನೀಡುವ ಯೋಜನೆಗಳನ್ನು ಕೈಗೊಳ್ಳಲಾಗಿದೆ. ಹೊಸ ರಸ್ತೆಗಳ ನಿರ್ಮಾಣ, ಗ್ರಾಮಸಂಪರ್ಕ ರಸ್ತೆಗಳ ನಿರ್ಮಾಣ, ಭೂಸಂರಕ್ಷಣೆ, ಅರಣ್ಯಾಭಿವೃದ್ಧಿ, ಶಾಲೆ ಹಾಗೂ ಇತರ ಕಟ್ಟಡಗಳ ನಿರ್ಮಾಣ. ಈ ಕಾರ್ಯಕ್ರಮಗಳಿಂದ ಕೇವಲ ಕಳೆದ ಒಂದು ವರ್ಷದಲ್ಲಿಯೇ 160 ಕೋಟಿ ರೂ.ಗಳಿಗೂ ಹೆಚ್ಚಿನ ವೆಚ್ಚದಲ್ಲಿ, ಪ್ರತಿದಿನ ಸರಾಸರಿ 6 ಲಕ್ಷ ಜನರಿಗೆ ಗ್ರಾಮೀಣ ಉದ್ಯೋಗ ದೊರೆತಿದೆ. ತನ್ಮೂಲಕ ರಸ್ತೆಗಳು, ಶಾಲೆಗಳು ಮತ್ತು ಇತರ ಕಟ್ಟಡಗಳು ಮುಂತಾದ ಅಮೂಲ್ಯ ಆಸ್ತಿಗಳ ನಿರ್ಮಾಣವಾಗಿದೆ.

1985–86ರಲ್ಲೇ 870ಕ್ಕೂ ಹೆಚ್ಚು ನೀರಾವರಿ ನಾಲೆಗಳನ್ನು ತೋಡಲಾಗಿದೆ. ಅದರೊಂದಿಗೆ 1,500 ಹಳೆಯ ಕೆರೆಗಳ ದುರಸ್ತಿ ಹಾಗೂ 130 ಹೊಸ ಕೆರೆಗಳ ನಿರ್ಮಾಣ ಮಾಡಲಾಗಿದೆ. ಕರ್ನಾಟಕ ಹಳ್ಳಿಗಳಿಗೆ ಇದು ಅತ್ಯಾವಶ್ಯಕ ಕೊಡುಗೆ.

**ತುರ್ತುಪರಿಹಾರ ಕ್ರಮಗಳು ಕುಡಿಯುವ ನೀರು, ಆಹಾರ ಧಾನ್ಯ, ಮೇವು**

ದೈನಂದಿನ ಆವಶ್ಯಕತೆಗಳಾದ ಆಹಾರ ಧಾನ್ಯ, ಕುಡಿಯುವ ನೀರು ಮತ್ತು ಮೇವು ಪೂರೈಕೆಗೆ ಹೆಚ್ಚಿನ ಗಮನ ನೀಡಲಾಗುತ್ತಿದೆ. 12,000ಕ್ಕೂ ಹೆಚ್ಚು ನ್ಯಾಯಬೆಲೆಯ ಅಂಗಡಿಗಳು; ಪ್ರತಿ ಕಿ.ಗ್ರಾಂಗೆ ರೂ. 1.50ರಂತೆ ರಿಯಾಯತಿ ದರದಲ್ಲಿ ಆಹಾರ ಧಾನ್ಯಗಳ ವಿತರಣೆ; ಸಾವಿರಾರು ಜಾನುವಾರುಗಳಿಗೆ ಮೇವನ್ನೊದಗಿಸಲು ಗೋಶಾಲೆಗಳ ನಿರ್ಮಾಣ; ತೊಂದರೆಗೊಳಗಾದ ಜಿಲ್ಲೆಗಳಿಗೆ ರಾಜ್ಯದ ಅರಣ್ಯದಿಂದ 1,200 ಟನ್‌ಗಳಷ್ಟು ಮೇವು ವಿತರಣೆ, ಪಂಜಾಬ್, ಹರ್ಯಾಣ ಮತ್ತು ಉತ್ತರಪ್ರದೇಶಗಳಿಂದ ಗೋಧಿ, ಹುಲ್ಲು ಮತ್ತು ಭತ್ತದ ಹೊಟ್ಟಿನ ಸಂಗ್ರಹ. ಇವೆಲ್ಲ ಈ ಸಂಕಷ್ಟದ ಪರಿಹಾರಕ್ಕಾಗಿ ಕರ್ನಾಟಕ ಸರ್ಕಾರವು ಕೈಗೊಂಡಿರುವ ತುರ್ತು ಕ್ರಮಗಳಲ್ಲಿ ಹಲವು.

**ಕ್ಷಾಮದ ವಿರುದ್ಧ ಸರ್ಕಾರದ ಅವಿರತ ಹೋರಾಟ ಮುಂದುವರಿದಿದೆ....**

**ಎರಡು ಕ್ಷೇತ್ರಗಳಲ್ಲಿ ತುರ್ತು ಪರಿಹಾರ ಉದ್ಯೋಗ ಸೃಷ್ಟಿ ಹಾಗೂ ಆಸ್ತಿ ನಿರ್ಮಾಣ**

**'ಕರ್ನಾಟಕ ವಾರ್ತೆ'**

# ಕರ್ನಾಟಕದಲ್ಲಿ ಬ್ಯಾಂಕುಗಳ ಹುಟ್ಟು ಮತ್ತು ಬೆಳೆವಣಿಗೆ

ಡಾ. ನವೀನಚಂದ್ರ ಕೆ. ತಿಂಗಳಾಯ

**ಕಳೆದ ವರ್ಷದ ಡಿಸೆಂಬರ್ ತಿಂಗಳಲ್ಲಿ ಮೈಸೂರಿನಲ್ಲಿ ನಡೆದ ವಿಶ್ವಕನ್ನಡ ಸಮ್ಮೇಳನದ ಅಂಗವಾಗಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹಾಗೂ ಸಮನ್ವಯ ಸಮಿತಿಯ ಸಂಯುಕ್ತ ಆಶ್ರಯದಲ್ಲಿ 17ರಂದು ಏರ್ಪಡಿಸಲಾಗಿದ್ದ 'ಕರ್ನಾಟಕದಲ್ಲಿ ಬ್ಯಾಂಕಿಂಗ್' ಎಂಬ ವಿಚಾರಸಂಕಿರಣದಲ್ಲಿ ಮಂಡಿಸಿದ ಒಂದು ಪ್ರಬಂಧ**

ಕರ್ನಾಟಕ ರಾಜ್ಯದಲ್ಲಿ ಹುಟ್ಟಿ ಬೆಳೆದ ಬ್ಯಾಂಕುಗಳು ದೇಶದ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಉತ್ತಮಸ್ಥಾನ ಪಡೆದು ಒಳ್ಳೆಯ ಹೆಸರನ್ನೂ ಗಳಿಸಿವೆ. ಬ್ಯಾಂಕಿಂಗಿನ ಕ್ಷಿತಿಜದಲ್ಲಿ ಧ್ರುವತಾರೆಗಳಂತೆ ಮೆರೆಯಬಲ್ಲ ಬ್ಯಾಂಕುಗಳಿಗೆ ಜನ್ಮವಿತ್ತ ಕೀರ್ತಿ ಕರ್ನಾಟಕಕ್ಕೆ ಸಲ್ಲುತ್ತದೆ. ಕಳೆದ ನೂರು ವರ್ಷಗಳಲ್ಲಿ ಇಲ್ಲಿ ಎಪ್ಪತ್ತೈದು ಬ್ಯಾಂಕುಗಳು ಜನ್ಮ ತಾಳಿವೆಯಾದರೂ, ಇವುಗಳಲ್ಲಿ ಇಂದು ಬದುಕಿ ಉಳಿದವು ಕೇವಲ ಏಳು ಬ್ಯಾಂಕುಗಳು ಮಾತ್ರ. ಹಲವು ಬ್ಯಾಂಕುಗಳು ಬಾಲಗ್ರಹಪೀಡೆಯಿಂದ ಎಳವೆಯಲ್ಲೇ ಸತ್ತರೆ, ಇನ್ನು ಕೆಲವು ಬ್ಯಾಂಕುಗಳು ವಯಸ್ಸಿಗೆ ಬಂದ ಬಳಿಕ ಇತರ ಬ್ಯಾಂಕುಗಳೊಂದಿಗೆ ವಿಲೀನಗೊಂಡುವು. ಇನ್ನು ಕೆಲವು ಬ್ಯಾಂಕುಗಳು ತಮ್ಮ ಕಾರ್ಯದಕ್ಷತೆಯಿಂದಾಗಿ ಬೃಹದಾಕಾರದಲ್ಲಿ ಬೆಳೆದು, ರಾಜ್ಯದ ಹೊರಗೂ ತಮ್ಮ ಕಾರ್ಯಕ್ಷೇತ್ರವನ್ನು ಪಸರಿಸಿವೆ. ಕರ್ನಾಟಕದಲ್ಲಿ ಹುಟ್ಟಿದ ನಾಲ್ಕು ಬ್ಯಾಂಕುಗಳು ಈಗ ಸಾರ್ವಜನಿಕ ಕ್ಷೇತ್ರದಲ್ಲಿವೆಯಾದರೆ, ಒಂದು ಭಾರತೀಯ ಸ್ಟೇಟ್ ಬ್ಯಾಂಕಿನ ಸಮೂಹದಲ್ಲಿದೆ. ಇನ್ನೆರಡು ಬ್ಯಾಂಕುಗಳು ಖಾಸಗಿ ಕ್ಷೇತ್ರದಲ್ಲಿವೆ. ಈ ಹಳೆಯ ಬ್ಯಾಂಕುಗಳೊಂದಿಗೆ ಅವುಗಳಿಗಿಂತ ಭಿನ್ನವಾದ ಹದಿಮೂರು ಗ್ರಾಮೀಣ ಬ್ಯಾಂಕುಗಳು ಕಳೆದ ಒಂದು ದಶಕದಲ್ಲಿ ಹುಟ್ಟಿಕೊಂಡಿವೆ.

ಕರ್ನಾಟಕದ ಬ್ಯಾಂಕುಗಳ ಒಂದು ವೈಶಿಷ್ಟ್ಯವೆಂದರೆ, ಅವುಗಳಲ್ಲಿ ಹೆಚ್ಚಿನವು ಮೊಳಕೆ ಬಂದುದು ಮಹಾನಗರಗಳ ಬದಲು ಸಣ್ಣ ಪುಟ್ಟ ಪೇಟೆಗಳಲ್ಲಿ. ದೇಶದ ಅನೇಕ ಜಿಲ್ಲಾ ಕೇಂದ್ರಗಳೂ ಬ್ಯಾಂಕುಗಳನ್ನು ಕಾಣದ ದಿನಗಳಲ್ಲಿ ಕರ್ನಾಟಕದ ಹಲವು ಪಟ್ಟಣಗಳಲ್ಲಿ ಬ್ಯಾಂಕುಗಳು ಅಸ್ತಿತ್ವಕ್ಕೆ ಬಂದಿದ್ದುವು. ಗ್ರಾಮಾಂತರಪ್ರದೇಶಗಳಿಗೂ ಇವು ಪಾದಾರ್ಪಣೆಮಾಡಿದ್ದವು. ಕರ್ನಾಟಕ ರಾಜ್ಯದಲ್ಲಿದ್ದಷ್ಟು ಬ್ಯಾಂಕಿಂಗ್ ಸವಲತ್ತುಗಳ ವ್ಯಾಪಕತೆ ದೇಶದ ಹೆಚ್ಚಿನ ರಾಜ್ಯಗಳಲ್ಲಿ ಕಾಣಸಿಗದು.

ಈ ಪ್ರಬಂಧದ ಮೂಲ ಉದ್ದೇಶ ಕರ್ನಾಟಕ ರಾಜ್ಯದಲ್ಲಿ ಸ್ಥಾಪನೆಯಾದ ಎಲ್ಲಾ ಬ್ಯಾಂಕುಗಳ ಹುಟ್ಟು ಮತ್ತು ಬೆಳವಣಿಗೆಯ ಸಂಕ್ಷಿಪ್ತ ಪರಿಚಯ. ಎರಡನೆಯದಾಗಿ, ಇವುಗಳ ಸ್ಥಾಪನೆಗೆ ಹಾಗೂ ಬೆಳೆವಣಿಗೆಗೆ ಪ್ರೇರಕವಾದ ಕಾರಣಗಳ ವಿಮರ್ಶೆ. ಬ್ಯಾಂಕಿಂಗ್ ಇತಿಹಾಸ ದರ್ಶನಕ್ಕೆ ಆಯ್ಕೆಮಾಡಿದ ಕಾಲಾವಧಿ 1870ರಿಂದ 1985ರ ತನಕ. 1870ರ ಕರ್ನಾಟಕ ಬಹುತೇಕ ಹಳೇ ಮೈಸೂರು ರಾಜ್ಯಕ್ಕೆ ಮಾತ್ರ ಸೀಮಿತವಾಗಿದ್ದರೂ ಈ ಪ್ರಬಂಧದ ವ್ಯಾಪಕತೆ ಕರ್ನಾಟಕ ರಾಜ್ಯದ ಪ್ರಸಕ್ತ ಭೂಪ್ರದೇಶಕ್ಕೆ ಅನ್ವಯಿಸುತ್ತದೆ. ಭಾರತೀಯ ರಿಸರ್ವ್ ಬ್ಯಾಂಕಿನ ವಿವಿಧ ವರ್ಷಗಳ ವರದಿಗಳಿಂದ ಸಂಗ್ರಹಿಸಿದ ಮಾಹಿತಿಗಳ ಆಧಾರದ ಮೇಲೆ ಕರ್ನಾಟಕ ಬ್ಯಾಂಕಿಂಗ್ ಇತಿಹಾಸದ ಮೈಲಿಗಲ್ಲುಗಳನ್ನು ಗುರುತಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

## ಪ್ರಥಮ ಬ್ಯಾಂಕುಗಳು

ಕರ್ನಾಟಕದಲ್ಲಿ, ಮುಖ್ಯವಾಗಿ ಹಳೇ ಮೈಸೂರು ರಾಜ್ಯದಲ್ಲಿ, ವ್ಯವಸ್ಥಿತ ಬ್ಯಾಂಕಿಂಗ್ ವ್ಯವಹಾರವನ್ನು ಪ್ರಾರಂಭಿಸಿದ ಶ್ರೇಯಸ್ಸು ಮೈಸೂರು ಸರಕಾರಕ್ಕೆ ಸಲ್ಲಬೇಕು. ಈ ಶತಮಾನದ ಆರಂಭದ ಮೊದಲು ಹಳ್ಳಿಗಳಲ್ಲಿ ಸಾಲಿಗರು ಪ್ರಬಲರಾಗಿದ್ದು, ಹಳ್ಳಿಗರ ಶೋಷಣೆ ನಡೆಯುತ್ತಿತ್ತು. ಸಹಕಾರಿ ಬ್ಯಾಂಕುಗಳೂ ಆಗ ಜನ್ಮ ತಾಳಿರಲಿಲ್ಲ. ಜನರಲ್ಲಿ ಉಳಿತಾಯದ ಮನೋಧರ್ಮವನ್ನು ಬೆಳೆಸುವ ಸಲುವಾಗಿ ಮೈಸೂರು ಸರ್ಕಾರದ ಸೇವಿಂಗ್ಸ್ ಬ್ಯಾಂಕುಗಳು 1870ರಲ್ಲಿ ಅಸ್ತಿತ್ವಕ್ಕೆ ಬಂದುವು. ಇವುಗಳು ಹೆಚ್ಚಾಗಿ ಜಿಲ್ಲಾ ಕೇಂದ್ರಗಳಲ್ಲಿ ಸ್ಥಾಪನೆಗೊಂಡು ಕ್ರಮೇಣ ತಾಲ್ಲೂಕು ಕೇಂದ್ರಗಳಿಗೆ ಹರಡಿದವು. ಈ ಬ್ಯಾಂಕುಗಳು ಜನರಿಂದ ಉಳಿತಾಯವನ್ನು ಸಂಗ್ರಹಿಸಲು ಸ್ವೀಕರಿಸುತ್ತಿದ್ದ ಅತೀ ಕಡಿಮೆ ಮೊತ್ತವೆಂದರೆ ನಾಲ್ಕು ಆಣೆಗಳು. ಠೇವಣಿದಾರರಿಗೆ ದೊರಕುತ್ತಿದ್ದ ಬಡ್ಡಿಯ ದರ ಶೇ. 3.5. ಈ ಬ್ಯಾಂಕುಗಳು 1923ರ ತನಕ ವ್ಯವಹಾರ ಮಾಡುತ್ತಿದ್ದುವು. ತಮ್ಮ ಕೆಲಸದಲ್ಲಿ ಹೆಚ್ಚಿನ ಫಲಕಾರಿಯಾಗದಿದ್ದುದರಿಂದ ಇವುಗಳನ್ನು 1922–23ರಲ್ಲಿ ಮುಚ್ಚಲಾಯಿತು.

ಸರಕಾರ ಸ್ಥಾಪಿಸಿದ ಬ್ಯಾಂಕುಗಳನ್ನು ಬಿಟ್ಟರೆ, ಈ ಶತಮಾನದ ಮೊದಲು ಹುಟ್ಟಿದ ಬ್ಯಾಂಕುಗಳು ಐದು. ಅವುಗಳಲ್ಲಿ ಮೊದಲನೆಯದಾದ ಚಿತ್ರದುರ್ಗ ಬ್ಯಾಂಕ್ (ನಿ) ಹುಟ್ಟಿದ್ದು ಚಿತ್ರದುರ್ಗದಲ್ಲಿ, 1870ರಲ್ಲಿ. ತ.ರಾ.ಸು. ಅವರ ಪ್ರಶಸ್ತಿ ವಿಜೇತ ಕಾದಂಬರಿಯ ನಾಯಕನಾದ ಮದಕರಿ ನಾಯಕ ಮಡಿದ ಸುಮಾರು ನೂರು ವರ್ಷಗಳ ಬಳಿಕ, ಈ ಬ್ಯಾಂಕು ಹುಟ್ಟಿತ್ತು. ದೀರ್ಘ ಕಾಲ ಬಾಳಿ ಬದುಕಿದರೂ ತನ್ನ ಕಾರ್ಯಕ್ಷೇತ್ರವನ್ನು ವ್ಯಾಪಕವಾಗಿ ಹರಡಿಸದ ಈ ಬ್ಯಾಂಕು 1961ರಲ್ಲಿ ಕರ್ನಾಟಕ ಬ್ಯಾಂಕಿನೊಂದಿಗೆ ವಿಲೀನಗೊಂಡಿತು.

ಎರಡನೆಯ ಬ್ಯಾಂಕು ಹುಟ್ಟಿದ್ದು ನಂಜನಗೂಡಿನಲ್ಲಿ. 1885ರಲ್ಲಿ ಸ್ಥಾಪನೆಯಾದ ನಂಜನಗೂಡು ಶ್ರೀಕಂಠೇಶ್ವರ ಬ್ಯಾಂಕ್ (ನಿ) ಮಾಡಿದ ಸಾಧನೆ ಹೆಚ್ಚಿಲ್ಲ. ಸುಮಾರು 8 ದಶಕಗಳ ಕಾಲ ಬದುಕಿದ್ದು ಅದು 1965ರಲ್ಲಿ ವಿಸರ್ಜನೆಗೊಂಡಿತು.

ಬೆಂಗಳೂರು ನಗರದಲ್ಲಿ ಹುಟ್ಟಿದ ಪ್ರಥಮ ಬ್ಯಾಂಕು ಬೆಂಗಳೂರು ಯೂನಿಯನ್ ಬ್ಯಾಂಕ್ (ನಿ). 1890ರಲ್ಲಿ ಜನ ತಳೆದ ಈ ಬ್ಯಾಂಕು ರಾಜ್ಯದಲ್ಲಿ ಹುಟ್ಟಿದ ಮೂರನೆಯ ಬ್ಯಾಂಕು

ಡಾ. ನವೀನಚಂದ್ರ ಕೆ. ತಿಂಗಳಾಯ, ಉಪಪ್ರಧಾನ ವ್ಯವಸ್ಥಾಪಕ (ಆಯೋಜನೆ ಮತ್ತು ಅಭಿವೃದ್ಧಿ), ಸಿಂಡಿಕೇಟ್ ಬ್ಯಾಂಕ್, ಪ್ರಧಾನ ಕಛೇರಿ, ಮಣಿಪಾಲ 576 119

ಇದರ ಆಯುಷ್ಯ ಸುಮಾರು 50 ವರ್ಷಗಳು. 1940ರಲ್ಲಿ ಇದು ತನ್ನ ವ್ಯವಹಾರವನ್ನು ಕೊನೆಗೊಳಿಸಿತು.

ಶ್ರೀರಂಗಪಟ್ಟಣ ಟೌನ್ ಬ್ಯಾಂಕ್ (ನಿ) ರಾಜ್ಯದಲ್ಲಿ ಸ್ಥಾಪನೆಯೊದ ನಾಲ್ಕನೆಯ ಬ್ಯಾಂಕು. ಟಿಪ್ಪು ಸುಲ್ತಾನನ ಮರಣದ ಸುಮಾರು ನೂರು ವರ್ಷಗಳ ಬಳಿಕ 1891ರಲ್ಲಿ ಅವನ ರಾಜಧಾನಿಯಲ್ಲಿ ಕಾರ್ಯಾರಂಭ ಮಾಡಿದ ಈ ಬ್ಯಾಂಕು ಗಳಿಸಿದ ಪ್ರಗತಿಯ ಮಾಹಿತಿಗಳು ದೊರೆತಿಲ್ಲ. ಇದರ ಅವಸಾನ ಕಾಲವೂ ತಿಳಿದಿಲ್ಲ.

ರಾಜ್ಯದ ಐದನೆಯ ಬ್ಯಾಂಕು ಜನ್ಮತಾಳಿದ್ದು ಕೋಲಾರ ಜಿಲ್ಲೆಯ ಅತಿ ಚಿಕ್ಕ ಪಟ್ಟಣದಲ್ಲಿ. ಕೋಲಾರದ ಚಿನ್ನದ ಗಣಿ ಆಗಿನ್ನೂ ಚಿನ್ನದ ಉತ್ಪಾದನೆಯಲ್ಲಿ ತೊಡಗಿರಲಿಲ್ಲ. ಸಿಡ್ಲಘಟ್ಟದಲ್ಲಿ ವೆಂಕಟರಮಣಸ್ವಾಮಿಯ ಸಾನ್ನಿಧ್ಯದಲ್ಲಿ ಶ್ರೀ ವೆಂಕಟರಮಣಸ್ವಾಮಿ ಬ್ಯಾಂಕ್ (ನಿ) 1892ರಲ್ಲಿ ಪ್ರಾರಂಭವಾಯಿತು. ಬ್ಯಾಂಕಿಂಗ್ ಕಂಪೆನಿಗಳ ಅಧಿನಿಯಮ 1949ರಲ್ಲಿ ತಿದ್ದುಪಡಿ ಆದಾಗ ಈ ಬ್ಯಾಂಕು ತಾನಾಗಿಯೇ ವಿಸರ್ಜನೆಗೊಂಡಿತು.

ಇಪ್ಪತ್ತನೆಯ ಶತಮಾನದ ಪ್ರಥಮ ಬ್ಯಾಂಕು ಮತ್ತು ಇಂದು ರಾಜ್ಯದ ಅತ್ಯಂತ ಹಳೆಯ ಬ್ಯಾಂಕು ಆಗಿ ಉಳಿದಿರುವ ಬ್ಯಾಂಕು—ಕಾರ್ಪೊರೇಶನ್ ಬ್ಯಾಂಕ್—ಹುಟ್ಟಿದ್ದು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ. ದೇಶದ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಅದ್ವಿತೀಯ ಸ್ಥಾನ ಗಳಿಸಿದ ಈ ಜಿಲ್ಲೆಯ ಬ್ಯಾಂಕುಗಳ ಬೆಳವಣಿಗೆಯನ್ನು ಸ್ವಲ್ಪ ವಿವರವಾಗಿ ಪರಿಶೀಲಿಸುವುದು ಉಚಿತವೆನಿಸುತ್ತದೆ.

## ದಕ್ಷಿಣ ಕನ್ನಡದ ಬ್ಯಾಂಕುಗಳು

ದಕ್ಷಿಣ ಕನ್ನಡದ ಮಣ್ಣು ಬ್ಯಾಂಕುಗಳ ಬೆಳವಣಿಗೆಗೆ ಬಹಳ ಫಲವತ್ತಾದುದು. ಇವುಗಳ ಬೀಜಾಂಕುರ ಮಾಡಿಸಿ, ನೀರುಣಿಸಿ, ಪೋಷಿಸಿದವರು ಅನೇಕ ದಕ್ಷ ಬ್ಯಾಂಕರುಗಳು. ಅವರ ಮುಂದಾಲೋಚನೆ ಹಾಗೂ ಕಾರ್ಯತತ್ಪರತೆಯಿಂದ ಇಲ್ಲಿ ಹುಟ್ಟಿದ ಹೆಚ್ಚಿನ ಬ್ಯಾಂಕುಗಳು ದೃಢವಾಗಿ ಬದುಕಿ ಉಳಿದಿವೆ. ರಾಜ್ಯದಲ್ಲಿ ಹುಟ್ಟಿದ ಎಪ್ಪತ್ತೈದು ಬ್ಯಾಂಕುಗಳ ಪೈಕಿ ಇಪ್ಪತ್ತೆರಡು ಬ್ಯಾಂಕುಗಳು ಈ ಒಂದು ಜಿಲ್ಲೆಯಲ್ಲಿ ಹುಟ್ಟಿವೆ. ಭಾರತದಲ್ಲಿ ಅತಿ ಹೆಚ್ಚು ಸಂಖ್ಯೆಯಲ್ಲಿ ಬ್ಯಾಂಕುಗಳಿಗೆ ಜನ್ಮವಿತ್ತ ಮೂರು ಜಿಲ್ಲೆಗಳೆಂದರೆ—ತಮಿಳು ನಾಡಿನ ಕೊಯಮತ್ತೂರು ಜಿಲ್ಲೆ, ಕೇರಳದ ತ್ರಿಚೂರು ಜಿಲ್ಲೆ ಹಾಗೂ ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆ. ಕೊಯಮತ್ತೂರಿನಲ್ಲಿ ಸುಮಾರು ಮೂವತ್ತೆಂಟು ಬ್ಯಾಂಕುಗಳು ಹುಟ್ಟಿದ್ದವು. ಅವುಗಳಲ್ಲಿ ಹೆಚ್ಚಿನವು 'ಪರೋಪಕಾರಿ ನಿಧಿ'ಗಳು. ಇಷ್ಟು ಬ್ಯಾಂಕುಗಳಲ್ಲಿ ಈಗ ಒಂದೇಒಂದು ಬ್ಯಾಂಕೂ ಉಳಿದಿಲ್ಲ; ಹಲವು ಎಂದೋ ಕೊನೆಯುಸಿರು ಎಳೆದರೆ, ಕೆಲವು ಇತರ ಜಿಲ್ಲೆಗಳ ಹೊರಗಣ ಬ್ಯಾಂಕುಗಳೊಂದಿಗೆ ವಿಲೀನಗೊಂಡು ತಮ್ಮ ಅಸ್ತಿತ್ವವನ್ನೇ ಕಳೆಕೊಂಡಿವೆ. ತ್ರಿಚೂರು ಜಿಲ್ಲೆಯಲ್ಲಿ ಮೂವತ್ತೇಳು ಬ್ಯಾಂಕುಗಳು ತಲೆ ಎತ್ತಿವೆ. ಅವುಗಳಲ್ಲಿ ಇಂದಿನ ತನಕ ಬಾಳಿ ಬಂದವು ಕೇವಲ ನಾಲ್ಕು ಬ್ಯಾಂಕುಗಳು. ಆದರೆ ದಕ್ಷಿಣ ಕನ್ನಡದ ಬಸಿರಿಂದ ಬಂದ ಇಪ್ಪತ್ತೆರಡು ಬ್ಯಾಂಕುಗಳಲ್ಲಿ ಐದು ಬ್ಯಾಂಕುಗಳು ಪಂಚ ಪಾಂಡವರಂತೆ ಕುರುಕ್ಷೇತ್ರದ ಸಂಗ್ರಾಮದಲ್ಲಿ (1949ರ ಬ್ಯಾಂಕಿಂಗ್ ಅಧಿನಿಯಮ ಜಾರಿಗೆ ಬಂದ ದಿನದಿಂದ 1969ರ ರಾಷ್ಟ್ರೀಕರಣದ ಅಧ್ಯಾದೇಶ ಜಾರಿಗೆ ಬರುವ ತನಕ ಬ್ಯಾಂಕಿಂಗ್ ಕ್ಷೇತ್ರದಲ್ಲಿ ನಡೆದ ಕತ್ತರಿ ಪ್ರಯೋಗದಲ್ಲಿ) ಜಯಶೀಲವಾಗಿವೆ. ಇವುಗಳಲ್ಲಿ ನಾಲ್ಕು ಬ್ಯಾಂಕುಗಳು ರಾಷ್ಟ್ರವ್ಯಾಪಿಯಾಗಿದ್ದು ರಾಷ್ಟ್ರೀಕರಣಗೊಂಡ ದೊಡ್ಡ ಬ್ಯಾಂಕುಗಳಾಗಿವೆ: ಕೆನರಾ ಬ್ಯಾಂಕು, ಸಿಂಡಿಕೇಟ್ ಬ್ಯಾಂಕು, ವಿಜಯಾ ಬ್ಯಾಂಕು ಮತ್ತು ಕಾರ್ಪೊರೇಶನ್ ಬ್ಯಾಂಕು (ಕೊನೆಯ ಎರಡು ಬ್ಯಾಂಕುಗಳು ರಾಷ್ಟ್ರೀಕರಣವಾದುದು 1980ರಲ್ಲಿ). ಖಾಸಗಿ ಕ್ಷೇತ್ರದಲ್ಲಿ ಉಳಿದ ಜಿಲ್ಲೆಯ ಇನ್ನೊಂದು ಬ್ಯಾಂಕು ಕರ್ನಾಟಕ ಬ್ಯಾಂಕ್ ಲಿಮಿಟೆಡ್. ಇದು ರಾಜ್ಯದಲ್ಲಿ ಖಾಸಗಿ ಕ್ಷೇತ್ರದ ದೊಡ್ಡ ಬ್ಯಾಂಕು ಆಗಿದೆ.

'ರಾಮಾಶ್ವಮೇಧ'ವನ್ನು ಬರೆದು ಕಬ್ಬಿಗರಿಗೆ 'ಭವತಿ ಭಿಕ್ಷಾಂ ದೇಹಿ' ಎಂಬ ಮಂತ್ರವನ್ನು ಕಲಿಸಿದ ಕವಿ ಮುದ್ದಣ ತೀರಿಹೋದ ಐದು ವರ್ಷಗಳ ಬಳಿಕ, ಅವನು ಕಲಿಸುತ್ತಿದ್ದ ಊರಾದ ಉಡುಪಿಯಲ್ಲಿ, 1906ರಲ್ಲಿ ಜಿಲ್ಲೆಯ ಪ್ರಥಮ ಬ್ಯಾಂಕಿನ ಜನನವಾಯಿತು. ಕೆನರಾ ಬ್ಯಾಂಕಿಂಗ್ ಕಾರ್ಪೊರೇಶನ್ (ಉಡುಪಿ) (ನಿ)ನ ಸ್ಥಾಪನೆಯಾದ 33 ದಿನಗಳಲ್ಲಿ ಮಂಗಳೂರಿನಲ್ಲಿ ಕೆನರಾ ಹಿಂದೂ ಪರ್ಮನೆಂಟ್ ಫಂಡ್‌ನ ಉದಯವಾಯಿತು. ಮುಂದೆ ಇದೇ ಕೆನರಾ ಬ್ಯಾಂಕ್ ಆಗಿ ನಾಮಾಂತರ ಹೊಂದಿತು.

ಮುಂದಿನ 39 ವರ್ಷಗಳಲ್ಲಿ ಮಂಗಳೂರಿನಲ್ಲಿ 8 ಬ್ಯಾಂಕುಗಳು ಹುಟ್ಟಿದರೂ, ಉಡುಪಿಯಲ್ಲಿ ಇನ್ನೂ 6 ಬ್ಯಾಂಕುಗಳು ಜನ್ಮ ತಾಳಿದವು. ಬ್ಯಾಂಕುಗಳಿಗೆ ಜನ್ಮ ನೀಡುವುದರಲ್ಲಿ ಈ ಎರಡು ಪಟ್ಟಣಗಳೊಳಗೆ ಪೈಪೋಟಿ ಇದ್ದಾಗ, ಇತರ ಸಣ್ಣ ಪಟ್ಟಣಗಳೂ ಬ್ಯಾಂಕುಗಳನ್ನು ಸ್ಥಾಪಿಸಿ ಪೋಷಿಸುವ ಪ್ರಯತ್ನ ಮಾಡಿವೆ. ತಾಲ್ಲೂಕು ಕೇಂದ್ರವಾದ ಕುಂದಾಪುರದಲ್ಲಿ ಎರಡು ಬ್ಯಾಂಕುಗಳು ಹುಟ್ಟಿಕೊಂಡರೂ ಹೆಚ್ಚು ಕಾಲ ಬಾಳಲಿಲ್ಲ. ಇನ್ನೊಂದು ತಾಲ್ಲೂಕು ಕೇಂದ್ರವಾದ ಪುತ್ತೂರಿನಲ್ಲಿ ಒಂದು ಬ್ಯಾಂಕಿನ ಜನ್ಮವಾಯಿತು. ಅತಿ ಸಣ್ಣ ಊರುಗಳಾದ ಮುಲ್ಕಿ, ಕಲ್ಯಾಣಪುರ ಮತ್ತು ಮೂಡಬಿದ್ರೆಗಳೂ ಒಂದೊಂದು ಬ್ಯಾಂಕನ್ನು ಹಡೆದಿದ್ದವು.

ಉಡುಪಿಯಲ್ಲಿ ಜನಿಸಿದ ಬ್ಯಾಂಕುಗಳಲ್ಲಿ ಎರಡು ಬ್ಯಾಂಕುಗಳನ್ನು ಪ್ರತ್ಯೇಕವಾಗಿ ಹೆಸರಿಸುವುದು ಅಗತ್ಯ. ಒಂದು ತುಳುನಾಡು ಬ್ಯಾಂಕ್ ಆಫ್ ಸಪ್ಲೈ ಏಜನ್ಸಿ (ನಿ). ಅತಿ ಅಲ್ಪಕಾಲ ವ್ಯವಹಾರಮಾಡಿದ ಈ ಬ್ಯಾಂಕು ಆಗಿನ ಕಾಲದ ಬ್ಯಾಂಕಿಂಗಿನಲ್ಲಿ ಅನೇಕ ಹೊಸ ವಿಧಾನಗಳನ್ನು, ಮುಖ್ಯವಾಗಿ ಠೇವಣಿ ಸಂಗ್ರಹದಲ್ಲಿ, ಬಳಕೆಗೆ ತಂದ ಖ್ಯಾತಿಯನ್ನು ಪಡೆದಿತ್ತು.

ಉಡುಪಿಯಲ್ಲಿ 1925ರಲ್ಲಿ ಹುಟ್ಟಿ, ಬ್ಯಾಂಕಿಂಗ್ ಜಗತ್ತಿನಲ್ಲಿ ಹೊಸ ಆಯಾಮಗಳನ್ನು ಅನುಷ್ಠಾನಕ್ಕೆ ತಂದ ಬ್ಯಾಂಕು ಕೆನರಾ ಇಂಡಸ್ಟ್ರಿಯಲ್ ಎಂಡ್ ಬ್ಯಾಂಕಿಂಗ್ ಸಿಂಡಿಕೇಟ್. ಸಣ್ಣ ವ್ಯಾಪಾರಿಗಳ, ನೇಯ್ಗೆಯವರ ಮತ್ತು ಮಧ್ಯಮ ವರ್ಗದ ಜನರ ಹಿತಸಾಧನೆಗಾಗಿ ಸ್ಥಾಪಿತವಾದ ಈ ಬ್ಯಾಂಕು ಸಾಧಿಸಿದ ಪ್ರಗತಿ ಉಲ್ಲೇಖನೀಯ. ಗ್ರಾಮಾಭಿವೃದ್ಧಿಗೆ ಇದರಿಂದ ಸಂದ ಸೇವೆ ಅಮೂಲ್ಯವಾದುದು. 1964ರಲ್ಲಿ ಇದು ತನ್ನ ಹೆಸರನ್ನು ಚುಟುಕುಗೊಳಿಸಿ 'ಸಿಂಡಿಕೇಟ್ ಬ್ಯಾಂಕ್' ಎಂದು ಕರೆಸಿಕೊಂಡಿತು.

ಕೋಟಿ ಚೆನ್ನಯರು ತುಳುನಾಡಿನ ಜಾನಪದದ ವೀರ ಸಹೋದರರು. ಜಿಲ್ಲೆಯ ಬ್ಯಾಂಕುಗಳಲ್ಲಿ ಕೆನರಾ ಬ್ಯಾಂಕು ಮತ್ತು ಸಿಂಡಿಕೇಟ್ ಬ್ಯಾಂಕುಗಳು ಕೋಟಿ ಚೆನ್ನಯರಂತೆ. ಐದು ಸಾವಿರ ಕೋಟಿ ರೂಪಾಯಿಗಳ ಠೇವಣಿ ಸಂಗ್ರಹಿಸಿದ ಕೆನರಾ ಬ್ಯಾಂಕು ಇಂದು ದೇಶದ ಎಲ್ಲಾ ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ [illegible] ಸ್ಥಾನದಲ್ಲಿದೆ. ನಾಲ್ಕು ಸಾವಿರ ಕೋಟಿ ರೂಪಾಯಿಗಳನ್ನು ಶೇಖರಿಸಿದ ಸಿಂಡಿಕೇಟ್ ಬ್ಯಾಂಕು ಆರನೆಯ ಸ್ಥಾನದಲ್ಲಿದೆ. ಜಿಲ್ಲೆಯ ಬ್ಯಾಂಕಿಂಗ್ ನಕಾಶೆಯಲ್ಲಿ ಇತ್ತೀಚೆಗೆ ಸೇರಿಕೊಂಡ ಇನ್ನೊಂದು ಬ್ಯಾಂಕು ನೇತ್ರಾವತಿ ಗ್ರಾಮೀಣ ಬ್ಯಾಂಕು. ಮಂಗಳೂರಿನಲ್ಲಿ

1985ರಲ್ಲಿ ಸ್ಥಾಪನೆಯಾದ ಈ ಬ್ಯಾಂಕಿನ ಪ್ರವರ್ತಕರು ಸಿಂಡಿಕೇಟ್ ಬ್ಯಾಂಕ್.

### ಬೆಂಗಳೂರಿನ ಬ್ಯಾಂಕುಗಳು

ದಕ್ಷಿಣ ಕನ್ನಡ ಜಿಲ್ಲೆಯನ್ನು ಬಿಟ್ಟರೆ, ದೀರ್ಘಾಯುಷ್ಯವಿರುವ ಬ್ಯಾಂಕುಗಳಿಗೆ ಜನ್ಮ ಕೊಟ್ಟ ಇನ್ನೊಂದು ಜಿಲ್ಲೆ ಎಂದರೆ ಬೆಂಗಳೂರು ಜಿಲ್ಲೆ ಮಾತ್ರ. ಕರ್ನಾಟಕದ ಪ್ರಮುಖ ನಗರವಾಗಿ ಬೆಳೆಯುತ್ತಿದ್ದ ಬೆಂಗಳೂರು ನಗರ ಒಟ್ಟು 13 ಬ್ಯಾಂಕುಗಳಿಗೆ ಆಶ್ರಯ ನೀಡಿದೆ. ಒಂದು ಬ್ಯಾಂಕು ನಗರದಿಂದ ಹೊರಗೆ, ರಾಮನಗರದಲ್ಲಿ, ಹುಟ್ಟಿತ್ತು. ಈ ಜಿಲ್ಲೆಯಲ್ಲಿ ಹುಟ್ಟಿದ 14 ಬ್ಯಾಂಕುಗಳಲ್ಲಿ ಎರಡು ಬ್ಯಾಂಕು ಗಳು ಮಾತ್ರ ಬದುಕಿ ಉಳಿದಿವೆ—ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಮತ್ತು ವೈಶ್ಯ ಬ್ಯಾಂಕ್ (ನಿ).

1913ರಲ್ಲಿ ಬ್ಯಾಂಕ್ ಆಫ್ ಮೈಸೂರಿನ ಜನನವಾಯಿತು. ಕರ್ನಾಟಕದ ಮತ್ತು ದೇಶದ ಆರ್ಥಿಕ ಅಭಿವೃದ್ಧಿಗೆ ಹಲವು ವಿಧಗಳಲ್ಲಿ ತನ್ನ ಕೊಡುಗೆಯನ್ನಿತ್ತ ಶ್ರೀ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರ ನೇತೃತ್ವದಲ್ಲಿ ಈ ಬ್ಯಾಂಕ್ ಅಸ್ತಿತ್ವಕ್ಕೆ ಬಂತು. ಮೈಸೂರು ಅರಸರ ಪಾಲುತನದಲ್ಲಿ ಬೆಳೆದ ಬ್ಯಾಂಕು 1956ರಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್ ಆಗಿ ಪರಿವರ್ತನೆ ಹೊಂದಿತು. ಕರ್ನಾಟಕದಲ್ಲಿ ವ್ಯಾಪಕವಾಗಿ ಹರಡಿದ್ದು, ಇದು ರಾಜ್ಯದ ಮೂರನೆಯ ದೊಡ್ಡ ಬ್ಯಾಂಕು ಆಗಿದೆ.

ಬೆಂಗಳೂರಿನ ವೈಶ್ಯ ಸಮಾಜದ ಹಲವಾರು ವರ್ತಕರ ಮುಂದಾಳು ತನದಲ್ಲಿ 1930ರಲ್ಲಿ ವೈಶ್ಯ ಬ್ಯಾಂಕ್ (ಲಿ) ಸ್ಥಾಪನೆಯಾಯಿತು. ಆ ಬಳಿಕ ಬೆಂಗಳೂರು ನಗರದಲ್ಲಿ ಹುಟ್ಟಿಕೊಂಡ ಎಂಟು ಬ್ಯಾಂಕುಗಳಲ್ಲಿ ಒಂದೂ ಹೆಚ್ಚು ಕಾಲ ಉಳಿಯಲಿಲ್ಲ. ವೈಶ್ಯ ಬ್ಯಾಂಕು ತನ್ನ ಸುವರ್ಣ ಮಹೋತ್ಸವವನ್ನಾಚರಿಸಿ, ಇಂದು ರಾಜ್ಯದ ಖಾಸಗಿ ಕ್ಷೇತ್ರದಲ್ಲಿ ರುವ ಒಂದನೆಯ ಬ್ಯಾಂಕು ಆಗಿದೆ.

ತನ್ನ ಮಡಿಲಲ್ಲಿ ಹುಟ್ಟಿ ಬೆಳೆದ ಬ್ಯಾಂಕುಗಳಲ್ಲಿ ಕೇವಲ ಎರಡೇ ಉಳಿದರೂ, ಬೆಂಗಳೂರು ನಗರ ರಾಜ್ಯದ ಇತರ ಕಡೆಗಳಿಂದಲೂ ರಾಜ್ಯದ ಹೊರಗಿನಿಂದಲೂ ಬಂದಿರುವ ಅನೇಕ ಬ್ಯಾಂಕುಗಳಿಗೆ ಆಸರೆ ಯನ್ನಿತ್ತಿದೆ. ಎಲ್ಲಾ ರಾಷ್ಟ್ರೀಕೃತ ಬ್ಯಾಂಕುಗಳು ಇಲ್ಲಿ ತಮ್ಮ ಶಾಖೆ ಗಳನ್ನು ತೆರೆದಿವೆ. ಅಂತೆಯೇ ಭಾರತೀಯ ಸ್ಟೇಟ್ ಬ್ಯಾಂಕ್ ಸಮೂಹದ ಎಲ್ಲಾ ಎಂಟು ಬ್ಯಾಂಕುಗಳೂ ಇಲ್ಲಿ ನೆಲೆ ನಿಂತಿವೆ. ಇನ್ನು ದೇಶದ ಇತರ ರಾಜ್ಯಗಳಿಂದ ಬಂದ ಅನೇಕ ಖಾಸಗಿ ಬ್ಯಾಂಕು ಗಳು ಹಲವು ಕಾಲದಿಂದ ಇಲ್ಲಿ ವ್ಯವಹಾರ ಮಾಡುತ್ತಿವೆ. ಇವುಗಳಲ್ಲದೆ ಒಂದು ವಿದೇಶಿ ಬ್ಯಾಂಕು ಕೂಡ ಇಲ್ಲಿ ತನ್ನ ಶಾಖೆಯನ್ನು ಹೊಂದಿದೆ.

ಬೆಂಗಳೂರು ನಗರ ಬ್ಯಾಂಕು ಠೇವಣಿಗಳ ಸಂಗ್ರಹಣೆಯ ದೃಷ್ಟಿಯಲ್ಲಿ ದೇಶದ ಮಹಾ ನಗರಗಳ ಸಾಲಿನಲ್ಲಿ ಐದನೆ ಸ್ಥಾನ ದಲ್ಲಿದೆ. ಇಲ್ಲಿ ಸುಮಾರು ಐನೂರು ಬ್ಯಾಂಕು ಶಾಖೆಗಳಿವೆ, ಇದು ದೇಶದ ಮಹಾ ನಗರಗಳ ಪೈಕಿ ಅತ್ಯಂತ ಹೆಚ್ಚು ಬ್ಯಾಂಕಿಂಗ್ ಸೌಲಭ್ಯಗಳಿರುವ ನಗರಗಳಲ್ಲಿ ಒಂದು ಎಂದು ಪರಿಗಣಿಸಲ್ಪಡುತ್ತದೆ. ಬ್ಯಾಂಕುಗಳು ಕೊಟ್ಟಿರುವ ಮುಂಗಡಗಳ ಆಧಾರದ ಮೇಲೆ ಕೂಡ ಬೆಂಗಳೂರು ನಗರ ಇಡೀ ದೇಶದಲ್ಲಿ ಐದನೆಯ ಸ್ಥಾನದಲ್ಲಿದೆ. ಮಂಗಳೂರು ನಗರ ಹೆಚ್ಚು ಬ್ಯಾಂಕುಗಳ ತಾಯಿಯಾದರೂ, ಸಂಪತ್ತಿನಲ್ಲಿ ಹಿರಿಯಕ್ಕ ಬೆಂಗಳೂರಿನ ಪಾಲು ಹಿರಿದು. ಸುಮಾರು 29 ಬ್ಯಾಂಕುಗಳನ್ನು ಆಕರ್ಷಿಸಿರುವ ಮಂಗಳೂರು, ಠೇವಣಿ ಸಂಗ್ರ ಹಣೆಯಲ್ಲಿ ದೇಶದಲ್ಲಿ 35ನೆಯ ಸ್ಥಾನವನ್ನು ಪಡೆದಿದೆ. ಆರ್ಥಿಕವಾಗಿ ಜಿಲ್ಲೆ ಹೆಚ್ಚು ಪ್ರಗತಿ ಸಾಧಿಸದಿದ್ದರೂ ರೂ. 520 ಕೋಟಿ ಗಳಿಗೂ ಮಿಕ್ಕಿ ಠೇವಣಿಗಳನ್ನು ಸಂಗ್ರಹಿಸಿದ ಜಿಲ್ಲೆಯ ಬ್ಯಾಂಕುಗಳ ಸಾಧನೆ ಗಮನೀಯವಾಗಿದೆ.

### ಇತರ ಜಿಲ್ಲೆಗಳ ಪಾಲು

ರಾಜ್ಯದ ಇತರ ಜಿಲ್ಲೆಗಳ ಪೈಕಿ ಹೆಚ್ಚಿನ ಸಂಖ್ಯೆಯಲ್ಲಿ ಬ್ಯಾಂಕು ಗಳಿಗೆ ಜನ್ಮವಿತ್ತ ಜಿಲ್ಲೆ ಬಿಜಾಪುರ ಜಿಲ್ಲೆ. 1908ರಿಂದ 1948ರ ತನಕ ಇಲ್ಲಿ ಏಳು ಬ್ಯಾಂಕುಗಳು ಹುಟ್ಟಿದವು. ಅವುಗಳಲ್ಲಿ ಪ್ರೌಢಾ ವಸ್ಥೆಯನ್ನು ಮುಟ್ಟುವ ಮೊದಲೇ 6 ಬ್ಯಾಂಕುಗಳು ಮುಂದುಡಿ ಹೋಗಿದ್ದವು. ಸುಮಾರು 54 ವಸಂತಗಳನ್ನು ಕಂಡ ಯೂನಿಯನ್ ಬ್ಯಾಂಕ್ ಆಫ್ ಬಿಜಾಪುರ ಎಂಡ್ ಸೋಲಾಪುರ (ನಿ) 1908ರಲ್ಲಿ ಬಿಜಾಪುರದಲ್ಲಿ ಜನಿಸಿತು. 1964ರಲ್ಲಿ ಸಾಂಗ್ಲಿ ಬ್ಯಾಂಕ್ (ನಿ) ನೊಂದಿಗೆ ಇದು ವಿಲೀನಗೊಂಡಿತು. ಸಾಂಗ್ಲಿ ಬ್ಯಾಂಕಿನೊಂದಿಗೆ ವಿಲೀನವಾದ ಇನ್ನೆರಡು ಬ್ಯಾಂಕುಗಳು—ಯುನೈಟೆಡ್ ಬ್ಯಾಂಕ್ ಆಫ್ ಕರ್ನಾಟಕ (ನಿ) ಮತ್ತು ಶ್ರೀ ಗುರುಗೋವಿಂದ ಸ್ಪೇಸೀ ಬ್ಯಾಂಕ್ (ನಿ).

ಈಗ ಬಿಜಾಪುರದಲ್ಲಿರುವ ಸ್ಥಳೀಯ ಬ್ಯಾಂಕು ಬಿಜಾಪುರ ಗ್ರಾಮೀಣ ಬ್ಯಾಂಕು. ಸಿಂಡಿಕೇಟ್ ಬ್ಯಾಂಕಿನ ಆಶ್ರಯದಲ್ಲಿ ಹುಟ್ಟಿದ ಈ ಬ್ಯಾಂಕು ಸ್ಥಾಪನೆಯಾದುದು 1983ರಲ್ಲಿ. ಇದು ಜಿಲ್ಲೆಯಲ್ಲಿ 66 ಶಾಖೆಗಳನ್ನು ಹೊಂದಿದೆ. ಬಿಜಾಪುರ ಗ್ರಾಮೀಣ ಬ್ಯಾಂಕ್ ಗ್ರಾಮೀಣ ಅಭಿವೃದ್ಧಿಗೆ ಸಹಾಯಕವಾಗಿರುತ್ತದೆ.

ಬೊಂಬಾಯಿ ಕರ್ನಾಟಕದ ಇನ್ನಿತರ ಜಿಲ್ಲೆಗಳಾದ ಬೆಳಗಾಂ ಮತ್ತು ಧಾರವಾಡ ಜಿಲ್ಲೆಗಳು ತಲಾ ನಾಲ್ಕು ಬ್ಯಾಂಕುಗಳಿಗೆ ಜನ್ಮ ವಿತ್ತಿವೆ. ಅವುಗಳಲ್ಲಿ ಯಾವುದೂ ಈಗ ಅಸ್ತಿತ್ವದಲ್ಲಿಲ್ಲ. ಬೆಳಗಾಂ ಜಿಲ್ಲೆಯ ನಾಲ್ಕು ಬ್ಯಾಂಕುಗಳಲ್ಲಿ ದೀರ್ಘ ಕಾಲ ಬಾಳಿದ ಬ್ಯಾಂಕು ಬೆಳಗಾಂ ಬ್ಯಾಂಕು. 1930ರಲ್ಲಿ ಜನನ ಹೊಂದಿ, 1975ರಲ್ಲಿ ಇದು ಬೊಂಬಾಯಿಯ ಯೂನಿಯನ್ ಬ್ಯಾಂಕ್ ಆಫ್ ಇಂಡಿಯ ದೊಂದಿಗೆ ವಿಲೀನವಾಯಿತು. ಇನ್ನೆರಡು ಬ್ಯಾಂಕುಗಳು ಕರ್ನಾಟಕದ ಎರಡು ಬ್ಯಾಂಕುಗಳೊಂದಿಗೆ ಸೇರ್ಪಡೆ ಹೊಂದಿದುವು : ಬ್ಯಾಂಕ್ ಆಫ್ ಸಿಟಿಜನ್ಸ್ (ನಿ) ಕಾರ್ಪೊರೇಶನ್ ಬ್ಯಾಂಕಿನೊಂದಿಗೆ ಮತ್ತು ರಾಮ ದುರ್ಗ ಬ್ಯಾಂಕ್ ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನೊಂದಿಗೆ.

ಧಾರವಾಡ ಜಿಲ್ಲೆಯ ನಾಲ್ಕು ಬ್ಯಾಂಕುಗಳಲ್ಲಿ ಎರಡು ಬ್ಯಾಂಕು ಗಳ ಬಗ್ಗೆ ಹೆಚ್ಚಿನ ವಿವರಗಳು ದೊರೆತಿಲ್ಲ. ಇನ್ನೆರಡು ಬ್ಯಾಂಕುಗಳು 1966ರಲ್ಲಿ ತಮ್ಮ ಅಸ್ತಿತ್ವವನ್ನು ಕಳೆದುಕೊಂಡವು ; ಹುಬ್ಬಳ್ಳಿ ಸಿಟಿ ಬ್ಯಾಂಕ್ (ನಿ) (ಸ್ಥಾಪನೆ 1930) ವಿಜಯಾ ಬ್ಯಾಂಕಿನೊಂದಿಗೆ ವಿಲೀನಗೊಂಡಿತು ; ಬ್ಯಾಂಕ್ ಆಫ್ ಕರ್ನಾಟಕ (1946ರಲ್ಲಿ ಸ್ಥಾಪನೆ) ಕರ್ನಾಟಕ ಬ್ಯಾಂಕ್ (ನಿ)ನೊಂದಿಗೆ ಸೇರ್ಪಡೆ ಹೊಂದಿತು.

ಧಾರವಾಡ ಮತ್ತು ಬೆಳಗಾಂ ಜಿಲ್ಲೆಗೆ ಒಂದು ಗ್ರಾಮೀಣ ಬ್ಯಾಂಕ್ 1976ರಲ್ಲಿ ಅಸ್ತಿತ್ವಕ್ಕೆ ಬಂದಿತು. ಇದರ ಪ್ರಧಾನ ಕಛೇರಿ ಧಾರವಾಡದಲ್ಲಿದ್ದು. ಎರಡೂ ಜಿಲ್ಲೆಗಳಲ್ಲಿ 188 ಶಾಖೆ ಗಳನ್ನು ಹೊಂದಿದೆ. ಸಿಂಡಿಕೇಟ್ ಬ್ಯಾಂಕ್ ಇದರ ಪ್ರವರ್ತಕ.

ಮಲೆನಾಡಿನಲ್ಲಿರುವ ಚಿಕ್ಕಮಗಳೂರು ಜಿಲ್ಲೆಯೂ ನಾಲ್ಕು ಬ್ಯಾಂಕುಗಳನ್ನು ಹೆರುವ ಯೋಗ ಹೊಂದಿದ್ದರೂ, ಅವುಗಳನ್ನು ಉಳಿಸಿಕೊಳ್ಳುವ ಪುಣ್ಯ ಪಡೆದಂತೆ ಇಲ್ಲ. ನಾಲ್ಕು ಬ್ಯಾಂಕುಗಳೂ ಹುಟ್ಟಿದ್ದು ಜಿಲ್ಲಾ ಕೇಂದ್ರದಿಂದ ಹೊರಗೆ—ಶೃಂಗೇರಿ, ಕೊಪ್ಪ,

ತರೀಕೆರೆ ಮತ್ತು ನರಸಿಂಹರಾಜಪುರದಲ್ಲಿ. ಇವುಗಳಲ್ಲಿ ಅತ್ಯಂತ ಹಳೆಯ ಬ್ಯಾಂಕ್ ಶೃಂಗೇರಿ ಶ್ರೀ ಶಾರದಾ ಬ್ಯಾಂಕ್ (ನಿ) 1914ರಲ್ಲಿ ಸ್ಥಾಪಿತವಾಯಿತು. ತನ್ನ ಕಾರ್ಯಕ್ಷೇತ್ರವನ್ನು ಯಾತ್ರಾ ಸ್ಥಳವಾದ ಶೃಂಗೇರಿಗೆ ಸೀಮಿತಗೊಳಿಸಿದ ಬ್ಯಾಂಕು 1962ರಲ್ಲಿ ಕರ್ನಾಟಕ ಬ್ಯಾಂಕಿನೊಂದಿಗೆ ವಿಲೀನವಾಯಿತು. ಸುಮಾರು 32 ವರ್ಷಗಳ ಕಾಲ ತರೀಕೆರೆಯಂತಹ ಸಣ್ಣ ಪಟ್ಟಣದಲ್ಲಿ ನೆಲೆ ನಿಂತ ಮಲ್ನಾಡ್ ಬ್ಯಾಂಕ್ (ನಿ) 1965ರಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್ ನೊಂದಿಗೆ ಸೇರಿಕೊಂಡಿತು.

ಮೈಸೂರು ಜಿಲ್ಲೆ ಮೂರು ಬ್ಯಾಂಕುಗಳಿಗೆ ಜನ್ಮವಿತ್ತ ಹಳೆಯ ಮುತ್ತೈದೆ. ಈ ಮೊದಲೇ ತಿಳಿಸಿದಂತೆ, 1885ರಲ್ಲಿ ನಂಜನಗೂಡು ಶ್ರೀಕಂಠೇಶ್ವರ ಬ್ಯಾಂಕಿಗೆ ಜನ್ಮವಿತ್ತು, 1891ರಲ್ಲಿ ಶ್ರೀರಂಗಪಟ್ಟಣ ಟೌನ್ ಬ್ಯಾಂಕನ್ನು ಆಕೆ ಹೆತ್ತಳು. ಮುಂದಿನ ಕೂಸು ಮಂಡ್ಯಮ್ ಬ್ಯಾಂಕಿಂಗ್ ಕಂಪೆನಿ (ರಿ)ಯ ಜಾತಕ ದೊರೆತಿಲ್ಲ. ಈಗ ಅಸ್ತಿತ್ವದಲ್ಲಿ ಇಲ್ಲದಿರುವ ಆ ಬ್ಯಾಂಕಿನ ಬಗ್ಗೆ ಹೆಚ್ಚು ಹೇಳುವಂಥದು ಏನೂ ಇಲ್ಲ. ಹಳೆಯ ತಲೆಮಾರಿನ ಬ್ಯಾಂಕುಗಳು ಇಲ್ಲದ್ದಿದ್ದರೂ ಹೊಸ ಪೀಳಿಗೆಯೊಂದು ಇತ್ತೀಚೆಗೆ ಇಲ್ಲಿ ಹುಟ್ಟಿ ಬೆಳೆದಿದೆ. ಕಾವೇರಿ ಗ್ರಾಮೀಣ ಬ್ಯಾಂಕ್ 1976ರಲ್ಲಿ ಸ್ಥಾಪನೆಯಾಯಿತು. ಇದರ ಪ್ರವರ್ತಕನೆ ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನಿಂದ.

ಹೈದರಾಬಾದ್ ಕರ್ನಾಟಕದ ಎರಡು ಜಿಲ್ಲೆಗಳಾದ ಗುಲ್ಬರ್ಗ ಮತ್ತು ರಾಯಚೂರುಗಳು ಬ್ಯಾಂಕಿಂಗ್ ಕಂಪೆನಿಗಳನ್ನು ಸ್ಥಾಪಿಸುವ ಕೆಲಸದಲ್ಲಿ ಹಿಂದೆ ಬೀಳಲಿಲ್ಲ. ಆದರೆ ಹುಟ್ಟಿದ ಬ್ಯಾಂಕುಗಳು ಅಲ್ಪಾಯುಷಿಗಳು. ಗುಲ್ಬರ್ಗದಲ್ಲಿ ಸರಸ್ವತಿ ಬ್ಯಾಂಕ್ ಹುಟ್ಟಿದ್ದು 1918ರಲ್ಲಿ. ಗುಲ್ಬರ್ಗ ಬ್ಯಾಂಕಿಂಗ್ ಕಂಪೆನಿ 1930ರಲ್ಲಿ ಮತ್ತು ಕಮರ್ಶಿಯಲ್ ಬ್ಯಾಂಕಿಂಗ್ ಕಂಪೆನಿ (ಲಿ) 1945ರಲ್ಲಿ. ಹೆಚ್ಚಿನ ಮಾಹಿತಿಗಳು ದೊರೆತಿಲ್ಲ.

ಈ ಜಿಲ್ಲೆಯ ಪ್ರಥಮ ಬ್ಯಾಂಕ್ ಹುಟ್ಟಿದ 60 ವರ್ಷಗಳ ಬಳಿಕ, 1978ರಲ್ಲಿ ಕೃಷ್ಣಾ ಗ್ರಾಮೀಣ ಬ್ಯಾಂಕು ಹುಟ್ಟಿತು. ಭಾರತೀಯ ಸ್ಟೇಟ್ ಬ್ಯಾಂಕ್ ಇದರ ಪ್ರಾಯೋಜಕ.

. ಎರಡು ಬ್ಯಾಂಕುಗಳನ್ನು ಹಡೆದ ರಾಯಚೂರು ಜಿಲ್ಲೆ ಬ್ಯಾಂಕಿಂಗ್ ವ್ಯವಹಾರದಲ್ಲಿ ಹೆಚ್ಚಿನ ಪ್ರಗತಿಯನ್ನು ಸಾಧಿಸಲಿಲ್ಲ. 1937ರಲ್ಲಿ ಜನಿಸಿದ ಶ್ರೀ ಶಾರದಾ ಬ್ಯಾಂಕಿಂಗ್ ಕಂಪೆನಿ 18ನೆಯ ವರ್ಷಕ್ಕೆ ಕಾಲಿಡುವಾಗ ಅದರ ವಿಸರ್ಜನೆಯಾಯಿತು. ಇದರ ಒಡ ಹುಟ್ಟಿದ ಒಸ್ಮಾನಿಯಾ ಅಜೀಜ್ ಬ್ಯಾಂಕಿನ ಯಾವುದೇ ವಿವರಗಳು ಲಭ್ಯವಿಲ್ಲ.

ಕೋಲಾರ ಮತ್ತು ಚಿತ್ರದುರ್ಗ ಜಿಲ್ಲೆಗಳು ಮಿತ ಸಂತಾನವನ್ನು ಪಡೆದ ಜಿಲ್ಲೆಗಳು. ಎರಡಕ್ಕೂ ಎರಡೇ ಸಾಕೆನಿಸಿರಬೇಕು. ಕೋಲಾರದ ಹಳೆಯ ಬ್ಯಾಂಕಿನ ಬಗ್ಗೆ ಈಗಾಗಲೇ ಹೇಳಿಯಾಗಿದೆ. ಸಿಡ್ಲಘಟ್ಟ ವೆಂಕಟರಮಣಸ್ವಾಮಿ ಬ್ಯಾಂಕ್ ಹುಟ್ಟಿದ 45 ವರ್ಷಗಳ ಅಂತರದಲ್ಲಿ ಸಿಟಿಜನ್ಸ್ ಬ್ಯಾಂಕು (ನಿ) ಜನ್ಮವಾಯಿತು. ಇದು ಜನ್ಮತಾಳಿದ್ದು ರಾಬರ್ಟ್‌ಸನ್‌ಪೇಟೆಯಲ್ಲಿ, 1937ರಲ್ಲಿ. ಈ ಬ್ಯಾಂಕು 1963ರಲ್ಲಿ ಸಿಂಡಿಕೇಟ್ ಬ್ಯಾಂಕಿನೊಂದಿಗೆ ಸೇರಿತು. ಆಮೇಲೆ ಇಪ್ಪತ್ತು ವರ್ಷಗಳ ಬಳಿಕ 1983ರಲ್ಲಿ ಕೆನರಾ ಬ್ಯಾಂಕಿನ ಆಶ್ರಯದಲ್ಲಿ ಕೋಲಾರ ಗ್ರಾಮೀಣ ಬ್ಯಾಂಕಿನ ಉದಯವಾಯಿತು.

ರಾಜ್ಯದ ಪ್ರಥಮ ಬ್ಯಾಂಕನ್ನು 1870ರಲ್ಲಿ ಸ್ಥಾಪಿಸಿದ ಬಳಿಕ ಚಿತ್ರದುರ್ಗ ಜಿಲ್ಲೆ ಇನ್ನೊಂದು ಬ್ಯಾಂಕಿನ ಮುಖ ಕಂಡದ್ದು 63 ವರ್ಷಗಳ ಬಳಿಕ ; ದಾವಣಗೆರೆಯಲ್ಲಿ ಮೈಸೂರು ಯೂನಿಯನ್ ಬ್ಯಾಂಕಿನ ಜನನವಾದಾಗ. ಇದರ ಅವಸಾನ ಕಾಲದ ವಿವರ ತಿಳಿದಿಲ್ಲ. 1981ರಲ್ಲಿ ಚಿತ್ರದುರ್ಗ ಗ್ರಾಮೀಣ ಬ್ಯಾಂಕು ಸ್ಥಾಪನೆಯಾಯಿತು. ಇದರ ಪ್ರಾಯೋಜಕ ಕೆನರಾ ಬ್ಯಾಂಕ್.

ಒಂದೊಂದೇ ಬ್ಯಾಂಕುಗಳಿಗೆ ಜನ್ಮವಿತ್ತು ತೃಪ್ತಿಪಡೆದ ಅಥವಾ ತಪ್ಪಪಟ್ಟ ನಾಲ್ಕು ಜಿಲ್ಲೆಗಳಿವೆ. ಇಲ್ಲಿನ ಬ್ಯಾಂಕುಗಳು ಕೇವಲ ಕೆಲವೇ ವರ್ಷ ಜೀವಂತವಿದ್ದು, ಎತ್ತರಕ್ಕೂ ಏರದೆ, ಉದ್ದಕ್ಕೂ ಹರಡದೆ ಇದ್ದಲ್ಲೇ ಬಿದ್ದುಹೋದವು. ಶಿವಮೊಗ್ಗ ಜಿಲ್ಲೆಯಲ್ಲಿ ಹುಟ್ಟಿದ ಪೀಪಲ್ಸ್ ಬ್ಯಾಂಕು ಮಾತ್ರ ಅರ್ಧ ಶತಮಾನದಷ್ಟು ಕಾಲ ಬದುಕಿತ್ತು. 1913ರಲ್ಲಿ ತೀರ್ಥಹಳ್ಳಿಯಲ್ಲಿ ಸ್ಥಾಪನೆಯಾದ ಬ್ಯಾಂಕು 1964ರಲ್ಲಿ ಸಿಂಡಿಕೇಟ್ ಬ್ಯಾಂಕಿನೊಂದಿಗೆ ಸೇರ್ಪಡೆ ಹೊಂದಿತು. ಇಪ್ಪತ್ತು ವರ್ಷಗಳ ಅನಂತರ ಇನ್ನೊಂದು ಬ್ಯಾಂಕು ಹುಟ್ಟಿತು. ಅದು ಸಹ್ಯಾದ್ರಿ ಗ್ರಾಮೀಣ ಬ್ಯಾಂಕು. ಅದರ ಪ್ರಾಯೋಜಕ ಕೆನರಾ ಬ್ಯಾಂಕು.

ಉತ್ತರ ಕನ್ನಡ ಜಿಲ್ಲೆ ಕರಾವಳಿ ಕರ್ನಾಟಕದಲ್ಲಿ ಸಂಪದ್ಭರಿತವಾಗಿದ್ದರೂ ಆರ್ಥಿಕವಾಗಿ ಹಿಂದುಳಿದಿದೆ. ಕರ್ನಾಟಕ ಏಕೀಕರಣದ ಮೊದಲು ಬೊಂಬಾಯಿ ಅಧಿಪತ್ಯಕ್ಕೆ ಒಳಪಟ್ಟಿದ್ದು, ವಿಸ್ತೃತ ಅಧಿಪತ್ಯದ ಗಡಿನಾಡ ಜಿಲ್ಲೆಯಾಗಿ ಸರಕಾರದ ಅನಾದರಣೆಗೆ ಗುರಿಯಾಗಿತ್ತು. ಅತ್ಯಂತ ಹೆಚ್ಚು ಬ್ಯಾಂಕುಗಳ ಜನನಿಯಾದ ತನ್ನ ನೆರೆಯ ದಕ್ಷಿಣ ಕನ್ನಡ ಜಿಲ್ಲೆಯೆದುರು ತಾನು ಬಂಜೆಯಲ್ಲವೆಂದು ಎನಿಸಿಕೊಳ್ಳುವ ಬಯಕೆ ಉತ್ತರ ಕನ್ನಡ ಜಿಲ್ಲೆಯದಾಗಿತ್ತು. ಆದರೆ ಈ ಬಯಕೆ ಈಡೇರುವಾಗ ಬಹಳ ತಡವಾಗಿತ್ತು. ದೇಶದ ನಾನಾ ಕಡೆಗಳಲ್ಲಿ ಬ್ಯಾಂಕಿಂಗ್ ಕಂಪೆನಿಗಳು ಹೆಚ್ಚುತ್ತಾ ಹೋಗಿ, ಆ ವೇಳೆಗೆ ಹೆಚ್ಚಿನವು ಸಾವು ಬದುಕುಗಳ ನಡುವೆ ಹೋರಾಡುತ್ತಿದ್ದುವು. 1939ರಿಂದ ಬ್ಯಾಂಕಿಂಗ್ ಅಧಿನಿಯಮವನ್ನು ಸ್ವಲ್ಪ ಬಿಗುಗೊಳಿಸಲಾಗಿತ್ತು. ಉತ್ತರ ಕನ್ನಡದ ಏಕಮಾತ್ರ ಬ್ಯಾಂಕ್ ಆದ ಬ್ಯಾಂಕ್ ಆಫ್ ರೂರಲ್ ಇಂಡಿಯಾ (ನಿ) 1940ರಲ್ಲಿ ಕಾರವಾರದಲ್ಲಿ ಸ್ಥಾಪನೆಯಾಯಿತು. ಬೊಂಬಾಯಿ ಕರ್ನಾಟಕದ ಇತರ ಜಿಲ್ಲೆಗಳಿಗೆ ತನ್ನ ಶಾಖೆಯನ್ನು ಹರಡಿಸಿದರೂ, ನಾಲ್ಕೈದು ವರ್ಷಗಳಿಗಿಂತ ಹೆಚ್ಚು ಕಾಲ ಇದು ಬದುಕಲು ಅಸಮರ್ಥವಾಯಿತು. 1945ರ ಮೊದಲೇ ಇದರ ಅವಸಾನವಾಗಿರಬೇಕು. ಆ ಬಳಿಕದ ಮಾಹಿತಿಗಳು ಲಭ್ಯವಿಲ್ಲ. 1985ರಲ್ಲಿ ವರದಾ ಗ್ರಾಮೀಣ ಬ್ಯಾಂಕಿನ ಸ್ಥಾಪನೆಯಾಯಿತು. ಜಿಲ್ಲಾ ಕೇಂದ್ರದ ಬದಲು ಈ ಬ್ಯಾಂಕಿನ ಕೇಂದ್ರ ಕಛೇರಿ ಕುಮಟಾದಲ್ಲಿದೆ. ಇದರ ಪ್ರಾಯೋಜಕ ಸಿಂಡಿಕೇಟ್ ಬ್ಯಾಂಕು.

ಮದರಾಸು ಕರ್ನಾಟಕದಿಂದ ಬಂದ ಬಳ್ಳಾರಿ ಜಿಲ್ಲೆ ಒಂದು ಬ್ಯಾಂಕಿಗೆ ಜನ್ಮ ಕೊಟ್ಟಿತ್ತು. ವಿಜಯನಗರದರಸರ ಸಾಮ್ರಾಜ್ಯದ ಕೇಂದ್ರಪ್ರದೇಶವಾದ ಈ ಜಿಲ್ಲೆ ಹದಿನಾರನೇ ಶತಮಾನದಲ್ಲಿ ವೈಭವದ ತುತ್ತತುದಿಯನ್ನೇರಿತ್ತು. ಕನಕದಾಸರು ಮೋಹನತರಂಗಿಣಿಯಲ್ಲಿ ಆ ಕಾಲದ ಧನವಂತ ವರ್ತಕರ ಹಣಕಾಸಿನ ವಹಿವಾಟನ್ನು ಹೀಗೆ ಬಣ್ಣಿಸಿದ್ದಾರೆ :

> ಚಪ್ಪನ್ನ ದೇಶದ ನಾಣೆಯಂಗಳ ನೋಟ
> ತಪ್ಪದ ಚಪಲ ಸೆಟ್ಟಿಗಳು
> ಒಪ್ಪ ಒಡೆದು ಕುಳಿರ್ದರು ಹಣ ಹೊನ್ನ
> ಕುಪ್ಪೆಯ ಮುಂದಿಟ್ಟುಕೊಂಡು.

ಆದರೆ ಮುಂದೆ ವಿಜಯನಗರದ ಪತನದ ಬಳಿಕ ಕನ್ನಡಿಗರ ಕರ್ಮಠತೆಯನ್ನು ಸಾರುತ್ತಾ ಬರಡಾಗಿ ಹೋದರೂ, ಈ ನೆಲದಲ್ಲಿ

ಒಂದು ಬ್ಯಾಂಕು ಅಂಕುರಿಸಿತ್ತು. ಅದರ ಹೆಸರು ರಾಯಲಸೀಮಾ ಬ್ಯಾಂಕ್(ನಿ).ಜನನ 1939ರಲ್ಲಿ, ಬಳ್ಳಾರಿಯಲ್ಲಿ. ರಾಜ್ಯ ವಿಭಜನೆಯ ನಂತರ ಈ ಬ್ಯಾಂಕು ನೆರೆಯ ಜಿಲ್ಲೆಯಾದ ಅನಂತಪುರಕ್ಕೆ (ಆಂಧ್ರ ಪ್ರದೇಶಕ್ಕೆ) ವಲಸೆಹೋಯಿತು. 1961ರಲ್ಲಿ ಇದು ಆಂಧ್ರ ಬ್ಯಾಂಕಿನೊಂದಿಗೆ ವಿಲೀನಗೊಂಡಿತು. ಮುಂದೆ 1976ರಲ್ಲಿ ಬಳ್ಳಾರಿ ಜಿಲ್ಲೆಗೂ ರಾಯಚೂರು ಜಿಲ್ಲೆಗೂ ಹಬ್ಬಿಕೊಂಡಿರುವ ತುಂಗಭದ್ರ ಗ್ರಾಮೀಣ ಬ್ಯಾಂಕಿನ ಸ್ಥಾಪನೆಯಾಯಿತು. ಇದರ ಪ್ರಾಯೋಜಕ ಕೆನರಾ ಬ್ಯಾಂಕ್.

ಮಂಡ್ಯ ಜಿಲ್ಲೆಯಲ್ಲಿ ಮಂಡ್ಯ ಬ್ಯಾಂಕ್ ಹುಟ್ಟಿತ್ತು ಎನ್ನುವ ದಾಖಲೆಯೊಂದನ್ನು ಬಿಟ್ಟರೆ, ಈ ಬ್ಯಾಂಕಿನ ಬಗ್ಗೆ ಇತರ ಯಾವ ಮಾಹಿತಿಯೂ ದೊರಕಿಲ್ಲ. 1985ರಲ್ಲಿ ವಿಜಯಾ ಬ್ಯಾಂಕಿನ ಆಶ್ರಯದಲ್ಲಿ ವಿಶ್ವೇಶ್ವರಯ್ಯ ಗ್ರಾಮೀಣ ಬ್ಯಾಂಕು ಇಲ್ಲಿ ಸ್ಥಾಪನೆಯಾಗಿದೆ.

ಬ್ಯಾಂಕುಗಳಿಗೆ ಜನ್ಮವೀಯದ ನಾಲ್ಕು ಜಿಲ್ಲೆಗಳಿವೆ. ಕೊಡಗು ದೇಶಕ್ಕೆ ವೀರಸೇನಾನಿಯನ್ನು ಕೊಟ್ಟಿರುವುದೇ ಹೊರತು, ಬ್ಯಾಂಕುಗಳನ್ನು ಕೊಟ್ಟಿಲ್ಲ. ಈ ಜಿಲ್ಲೆಗೆ ವಾಣಿಜ್ಯ ಬ್ಯಾಂಕಿನ ಸೇವಾ ಸೌಲಭ್ಯವನ್ನು ಪ್ರಥಮವಾಗಿ ದೊರಕಿಸಿದ ಶ್ರೇಯಸ್ಸು, ಕಾರ್ಪೊರೇಶನ್ ಬ್ಯಾಂಕಿಗೆ ಸಲ್ಲುತ್ತದೆ. 1935ರಲ್ಲಿ ಈ ಬ್ಯಾಂಕು ಮಡಿಕೇರಿಯಲ್ಲಿ ತನ್ನ ಶಾಖೆಯನ್ನು ತೆರೆದು ಅಂದಿನಿಂದ ಜಿಲ್ಲೆಯ ಆರ್ಥಿಕ ಪ್ರಗತಿಯಲ್ಲಿ ಪಾಲುಗೊಂಡಿದೆ. 1984ರಲ್ಲಿ ಕೊಡಗು ಮತ್ತು ಚಿಕ್ಕಮಗಳೂರು ಜಿಲ್ಲೆಗಳಿಗೆ ಸೀಮಿತವಾದ ಚಿಕ್ಕಮಗಳೂರು ಕೊಡಗು ಗ್ರಾಮೀಣ ಬ್ಯಾಂಕಿನ ಸ್ಥಾಪನೆಯಾಯಿತು. ಇದರ ಪ್ರಾಯೋಜನೆ ಕೂಡ ಕಾರ್ಪೊರೇಶನ್ ಬ್ಯಾಂಕಿನದು.

ಬಹಮನಿ ಸುಲ್ತಾನರ ಆಡುಂಬೊಲವಾಗಿದ್ದ ಬೀದರ್ ಜಿಲ್ಲೆಯಲ್ಲಿ ಯಾವುದೇ ಬ್ಯಾಂಕು ಬೆಳೆಯಲಿಲ್ಲ. ಸುಲ್ತಾನರ ಆಳ್ವಿಕೆಯ ಕಾಲದಲ್ಲಿ ಲೇವಾದೇವಿ ಪದ್ಧತಿ ಹೇಗೆ ನಡೆದಿತ್ತೋ ತಿಳಿಯದು. 1976ರ ಬಳಿಕ ರಾಜ್ಯದಲ್ಲಿ ಗ್ರಾಮೀಣ ಬ್ಯಾಂಕುಗಳ ಆವಿಷ್ಕಾರವಾದರೂ ಈ ಜಿಲ್ಲೆಯ ನೆಲದಲ್ಲಿ ಅದರ ಸ್ಥಾಪನೆಯಾಗಲಿಲ್ಲ. ನೆರೆಯ ಗುಲ್ಬರ್ಗ ಜಿಲ್ಲೆಯಲ್ಲಿ ನೆಲೆಯಾದ ಕೃಷ್ಣಾ ಗ್ರಾಮೀಣ ಬ್ಯಾಂಕಿನ ವ್ಯಾಪ್ತಿಗೆ ಈ ಜಿಲ್ಲೆಯನ್ನು ಸೇರಿಸಲಾಯಿತು.

ತುಮಕೂರು ಜಿಲ್ಲೆಗೆ ತನ್ನದೇ ಆದ ಬ್ಯಾಂಕನ್ನು ನೋಡುವ ಭಾಗ್ಯ ಲಭಿಸಿದ್ದು 1982ರಲ್ಲಿ. ಈ ಭಾಗ್ಯವನ್ನು ಕಲ್ಪಿಸಿಕೊಟ್ಟು ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಕಲ್ಪತರು ಗ್ರಾಮೀಣ ಬ್ಯಾಂಕನ್ನು ಸ್ಥಾಪನೆಮಾಡಿತು. ಇದರ ಕಾರ್ಯಕ್ಷೇತ್ರ ಹಾಸನ ಜಿಲ್ಲೆಯನ್ನೂ ಒಳಗೊಂಡಿರುವುದರಿಂದ, ಅಲ್ಲಿನ ಜನಜೀವನ ಹಸನಾದರೂ, ಹಾಸನ ಜಿಲ್ಲೆಯ ಬಂಜೆತನ ನಿವಾರಣೆಯಾಗಲಿಲ್ಲ.

ಇದಿಷ್ಟು, ರಾಜ್ಯದಲ್ಲಿ ಹುಟ್ಟಿದ ಬ್ಯಾಂಕುಗಳ ಜನನ ವೃತ್ತಾಂತ.

### ಬೆಳವಣಿಗೆಯ ಕಾರಣಗಳು

1949ರ ಬ್ಯಾಂಕಿಂಗ್ ಕಂಪೆನಿಗಳ ನಿಯಂತ್ರಣ ಅಧಿನಿಯಮ ಜಾರಿಗೆ ಬರುವ ಮೊದಲು ಬ್ಯಾಂಕಿಂಗ್ ಕಂಪನಿಯನ್ನು ಸ್ಥಾಪಿಸುವುದು ಬಹಳ ಸುಲಭಸಾಧ್ಯವಾಗಿತ್ತು. ಮೂರು ಜನ ಪ್ರವರ್ತಕರು ಒಟ್ಟು ಸೇರಿ ಪಾಲುಬಂಡವಾಳದಿಂದ ಬ್ಯಾಂಕನ್ನು ಸ್ಥಾಪಿಸಬಹುದಾಗಿತ್ತು. ಮೂಲ ಧನಕ್ಕೆ ಕನಿಷ್ಠ ಮಿತಿಯ ಕಟ್ಟುಪಾಡು ಇರಲಿಲ್ಲ. 1935ಕ್ಕೆ ಮೊದಲು ಬ್ಯಾಂಕುಗಳನ್ನು ನಿಯಂತ್ರಿಸಲು ರಿಸರ್ವ್ ಬ್ಯಾಂಕೇ ಹುಟ್ಟಿರಲಿಲ್ಲ. ಬ್ಯಾಂಕುಗಳ ಹುಟ್ಟು ಸಾವು ಆಗ ತೀರಾ ಸಾಮಾನ್ಯವಾದ ವಿಚಾರವಾಗಿತ್ತು. ಬ್ಯಾಂಕಿನ ಶಾಖೆಗಳನ್ನು ತೆರೆಯುವುದಕ್ಕೂ ಮುಚ್ಚುವುದಕ್ಕೂ ರಿಸರ್ವ್ ಬ್ಯಾಂಕಿನ ಅನುಮತಿಯನ್ನು ಪಡೆಯಬೇಕಾಗಿರಲಿಲ್ಲ. ಈ ಹಿನ್ನೆಲೆಯಲ್ಲಿ ಕೆಲವೇ ಮಂದಿ ಸಾಮಾಜಿಕ ಧುರೀಣರ ಮತ್ತು ವ್ಯಾಪಾರಿಗಳ ಪ್ರಯತ್ನದಿಂದ ಬ್ಯಾಂಕುಗಳು ಹುಟ್ಟಿಕೊಂಡುವು.

ಬ್ಯಾಂಕುಗಳ ಸ್ಥಾಪನೆಗೆ ಅನುಕೂಲವಾದ ಕಾರಣಗಳನ್ನು ಎರಡು ವಿಧಗಳಾಗಿ ವಿಂಗಡಿಸಬಹುದು :

1 ಸ್ವದೇಶೀ ಚಳವಳದ ಬೆಂಬಲ
2 ಸಾಮಾಜಿಕ ಪ್ರಗತಿಯ ಹಂಬಲ

1905ರಲ್ಲಿ ಪ್ರಾರಂಭವಾದ ಸ್ವದೇಶೀ ಚಳವಳ ದೇಶದ ರಾಷ್ಟ್ರೀಯ ಜೀವನದಲ್ಲಿ ಅನೇಕ ಮಾರ್ಪಾಡುಗಳನ್ನುಂಟುಮಾಡಿತು. ವಿದೇಶೀ ವಸ್ತುಗಳ ಬಹಿಷ್ಕಾರದೊಂದಿಗೆ ಸ್ವದೇಶೀ ವಸ್ತುಗಳಿಗೆ ಪ್ರೋತ್ಸಾಹ ದೊರೆಯಿತು. ಅನೇಕ ಚಿಕ್ಕಪುಟ್ಟ ಉದ್ದಿಮೆಗಳು ಅಲ್ಲಲ್ಲಿ ತಲೆಯೆತ್ತಿದವು. ಹಣಕಾಸಿನ ರಂಗದಲ್ಲಿ ಅನೇಕ ವಿಮಾ ಕಂಪೆನಿಗಳೂ, ಬ್ಯಾಂಕುಗಳೂ ಸ್ವದೇಶೀ ಚಳವಳದ ಮಹಾಪೂರದಲ್ಲಿ ಅಸ್ತಿತ್ವಕ್ಕೆ ಬಂದವು. ಅನೇಕ ರಾಜಕೀಯ ಮುಖಂಡರು ಬ್ಯಾಂಕುಗಳ ಸಂಸ್ಥಾಪಕರಾದರು. ಜನಪ್ರಿಯ ಮುಖಂಡರ ನೇತೃತ್ವದಲ್ಲಿ ಹುಟ್ಟಿದ ಬ್ಯಾಂಕುಗಳ ಜನರ ಪ್ರೋತ್ಸಾಹವನ್ನು ಗಳಿಸುವುದರಲ್ಲಿ ಸಮರ್ಥವಾದವು. ಕರ್ನಾಟಕ ರಾಜ್ಯದ ಹೊರಗೂ ಅನೇಕ ಬ್ಯಾಂಕ್‌ಗಳಿಗೆ ಮತ್ತು ವಿಮಾ ಕಂಪೆನಿಗಳಿಗೆ ಜನನಾಯಕರ ಮಾರ್ಗದರ್ಶನ ಮತ್ತು ಆಶ್ರಯಗಳು ದೊರೆತಿದ್ದುವು.

ಸಮಾಜ ಸುಧಾರಣೆ ರಾಜಕೀಯ ಬೆಳವಣಿಗೆಯೊಂದಿಗೆ ಬೆಳೆದುಬಂದ ಒಂದು ಪ್ರಗತಿಪರ ಕಾರ್ಯಸಾಧನೆ. ವಿವಿಧ ಜಾತಿ ಪಂಗಡಗಳು ತಮ್ಮ ಜನರ ಸಾಮಾಜಿಕ ಬದಲಾವಣೆಗಾಗಿ ಸಂಘಟಿತವಾಗಿ ದುಡಿಯುವುದು ಈ ಶತಮಾನದ ಆದಿಯಿಂದ ಆರಂಭವಾಯಿತು. ಅನೇಕ ಸಮಾಜಸುಧಾರಕರೂ ಹುಟ್ಟಿಕೊಂಡರು. ತಮ್ಮ ಜನಕ್ಕೆ ಶಿಕ್ಷಣವನ್ನು ಒದಗಿಸುವ ಅಗತ್ಯವನ್ನು ಮನಗಂಡ ಅವರು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಲಾರಂಭಿಸಿದರು. ಜಾತಿಯ ನೆಲೆಯಲ್ಲಿ ಶಾಲೆಗಳು ಮತ್ತು ವಿದ್ಯಾವರ್ಧಕ ಸಂಸ್ಥೆಗಳು ಸ್ಥಾಪನೆಯಾದವು. ವಿದ್ಯಾ ಪ್ರಚಾರವಾದ ಬಳಿಕ ಜಾತಿಯ ನೆಲೆಯಲ್ಲಿಯೇ ಬ್ಯಾಂಕುಗಳ ಸ್ಥಾಪನೆ ನಡೆಯಿತು. ಒಂದೇ ಜಾತಿಯ ಜನ ಒಟ್ಟು ಸೇರಿ ಬ್ಯಾಂಕನ್ನು ಸ್ಥಾಪಿಸಿದರು. ಬಂಡವಾಳದಲ್ಲಿ ಪಾಲುಗಾರಿಕೆಯನ್ನು ಜಾತಿಯ ನೆಲೆಯಲ್ಲಿಯೇ ಸಂಯೋಜಿಸಿದರು. ಬ್ಯಾಂಕಿನ ನೌಕರಿಯನ್ನೂ ಬ್ಯಾಂಕಿಂಗ್ ಸವಲತ್ತುಗಳನ್ನೂ ತಮ್ಮ ಜನರಿಗೇನೇ ಸೀಮಿತಗೊಳಿಸಿದರು. ಬ್ಯಾಂಕುಗಳು ಅಣಬೆಗಳಂತೆ ಹುಟ್ಟಿಕೊಂಡವು. ಸದ್ದಿಲ್ಲದೆ ಮುರುಟಿಹೋಗುತ್ತಿದ್ದ ಆ ಕಾಲದಲ್ಲಿ ಜಾತಿಯ ಆಧಾರದ ಮೇಲೆ ಹುಟ್ಟಿದ ಬ್ಯಾಂಕುಗಳು ಸ್ವಜಾತಿ ಬಾಂಧವರ ಬೆಂಬಲದಿಂದಲೇ ಬಾಳಿ ಬದುಕಿದುವು. ಒಂದು ಬ್ಯಾಂಕು ತನ್ನ ಪಾಲುದಾರರಾಗುವವರ ಅರ್ಹತೆಯನ್ನು ಜಾತಿಯ ನೆಲೆಯಲ್ಲಿ ಎಷ್ಟು ಸಂಕುಚಿತಗೊಳಿಸಿತ್ತು ಎಂದರೆ, ಆ ಜಾತಿಯಲ್ಲಿ ಸಹಪಂಕ್ತಿಯಲ್ಲಿ ಕುಳಿತು ಬೋಜನಮಾಡಲು ಅರ್ಹರಾದವರು ಮಾತ್ರ ಪಾಲುದಾರರಾಗಬಹುದೆಂದು ನಿಗದಿಮಾಡಿತ್ತು.

ಸ್ವದೇಶಿ ಚಳವಳದಿಂದ ಸ್ಫೂರ್ತಿ ಪಡೆದು, ತನ್ನ ಪರಿಸರದ ಜನರ ಆರ್ಥಿಕ ಪ್ರಗತಿಗೆ ಅನುಕೂಲವಾಗಬೇಕೆಂದು ಬಯಸಿ ಹುಟ್ಟಿದ ಬ್ಯಾಂಕುಗಳಲ್ಲಿ ಕೆಲವನ್ನು ಗುರುತಿಸಬಹುದು. ಅವುಗಳಲ್ಲಿ ಕೆಲವು—

| | |
|---|---|
| ಕೆನರಾ ಬ್ಯಾಂಕಿಂಗ್ ಕಾರ್ಪೊರೇಶನ್ (ನಿ) | 1906 |
| ಕೆನರಾ ಬ್ಯಾಂಕ್ (ನಿ) | 1906 |
| ಬ್ಯಾಂಕ್ ಆಫ್ ಮೈಸೂರ್ (ನಿ) | 1913 |
| ಕೆನರಾ ಇಂಡಸ್ಟ್ರಿಯಲ್ ಎಂಡ್ ಬ್ಯಾಂಕಿಂಗ್ ಸಿಂಡಿಕೇಟ್ (ನಿ) | 1925 |

ಇವುಗಳಲ್ಲದೆ ಸ್ಥಾನೀಯ ಸ್ವಾಭಿಮಾನದ ಆಧಾರದ ಮೇಲೆ ಚಿಕ್ಕ ಪುಟ್ಟ ಊರುಗಳಲ್ಲಿ ಸ್ಥಾನೀಯ ನಾಯಕರ ಛಲದಿಂದಾಗಿ ಅಥವಾ ಊರ ವರ್ತಕರ ಬೆಂಬಲದಿಂದ ಹುಟ್ಟಿದ ಚಿಕ್ಕ ಬ್ಯಾಂಕುಗಳೂ ಇವೆ. ತಮ್ಮ ಊರಿನ ಜನರ ಹಿತಕ್ಕಾಗಿ ಆರಂಭವಾದ ಈ ತರದ ಬ್ಯಾಂಕುಗಳು ದೊಡ್ಡ ಪ್ರಮಾಣದಲ್ಲಿ ಬೆಳೆಯಲಾರದಾದವು. ಅವುಗಳಲ್ಲಿ ಕೆಲವನ್ನು ಹೆಸರಿಸಬಹುದು :

| | |
|---|---|
| ಬಾಗಲಕೋಟೆ ಕಮರ್ಶಿಯಲ್ ಬ್ಯಾಂಕ್ (ಲಿ) | 1922 |
| ಕೊಪ್ಪ ಬ್ಯಾಂಕ್ (ನಿ) | 1923 |
| ಉಡುಪಿ ಬ್ಯಾಂಕ್ (ನಿ) | 1925 |
| ಮುಲ್ಕಿ ಬ್ಯಾಂಕ್ (ನಿ) | 1929 |
| ಹುಬ್ಬಳ್ಳಿ ಸಿಟಿ ಬ್ಯಾಂಕ್ (ನಿ) | 1930 |
| ಗುಲ್ಬರ್ಗ ಬ್ಯಾಂಕಿಂಗ್ ಕಂಪೆನಿ (ನಿ) | 1930 |
| ಕುಂದಾಪುರ ಬ್ಯಾಂಕ್ (ನಿ) | 1932 |
| ರಾಮದುರ್ಗ ಬ್ಯಾಂಕ್ (ನಿ) | 1944 |
| ಮಂಡ್ಯ ಬ್ಯಾಂಕ್ (ನಿ) | 1944 |
| ಧಾರವಾಡ ಬ್ಯಾಂಕ್ (ನಿ) | 1944 |

ಊರೊಂದರ ಹೆಸರನ್ನು ಹೊತ್ತಿದ್ದರೂ ಊರೂರು ತಿರುಗಿದ ಒಂದೆರಡು ಬ್ಯಾಂಕುಗಳೂ ಇವೆ. ಉದಾಹರಣೆಗೆ—ಬೆಳಗಾಂ ಬ್ಯಾಂಕ್ (ಲಿ) (1930) ಮತ್ತು ಬ್ಯಾಂಕ್ ಆಫ್ ಮಂಗಳೂರು (ನಿ) (1931). ಅಂತೆಯೇ ಒಂದು ನಿರ್ದಿಷ್ಟವಾದ ಪ್ರದೇಶದಲ್ಲಿ ಬ್ಯಾಂಕಿಂಗ್ ವ್ಯವಹಾರವನ್ನು ಮಾಡುವ ಉದ್ದೇಶದಿಂದ ಸ್ಥಾಪನೆಯಾದ ಬ್ಯಾಂಕುಗಳೂ ಇವೆ. ಉದಾಹರಣೆಗೆ ಸದರ್ನ್ ಇಂಡಿಯಾ ಅಪೆಕ್ಸ್ ಬ್ಯಾಂಕ್ (ನಿ) (1942) ಮತ್ತು ಮಹಾರಾಷ್ಟ್ರ ಅಪೆಕ್ಸ್ ಬ್ಯಾಂಕ್ (ನಿ) (1943). ಉಡುಪಿಯಲ್ಲಿ ಸಿಂಡಿಕೇಟ್ ಬ್ಯಾಂಕಿನ ಆಶ್ರಯದಲ್ಲಿ ಹುಟ್ಟಿ ಬೆಳೆದ ಬ್ಯಾಂಕುಗಳು 1953ರಲ್ಲಿ ಅದೇ ಬ್ಯಾಂಕಿನೊಂದಿಗೆ ವಿಲೀನವಾದವು.

ಕೆಲವು ವ್ಯಾಪಾರೀ ವರ್ಗದ ಒಂದೇ ಪರಿವಾರದ ಸದಸ್ಯರಿಂದ ಸ್ಥಾಪಿಸಲ್ಪಟ್ಟ ಬ್ಯಾಂಕುಗಳೂ ಇವೆ. ಖಾಸಗಿ ಬ್ಯಾಂಕುಗಳಾಗಿ ಆರಂಭವಾಗಿ ಮುಂದೆ ಪಾಲು ಬಂಡವಾಳದ ಆಧಾರದ ಮೇಲೆ ಬೆಳೆದ ಬ್ಯಾಂಕುಗಳ ಪೈಕಿ ಕೆಲವು ಈ ಕೆಳಗಿನವುಗಳು :

| | |
|---|---|
| ಪಾಂಗಾಳ ನಾಯಕ ಬ್ಯಾಂಕ್ (ನಿ) | 1920 |
| ನಗರ್‌ಕಾರ್ಸ್ ಬ್ಯಾಂಕ್ (ನಿ) | 1934 |
| ಆತ್ತೂರು ಎಂಡ್ ಜವಾಹರ್ ಬ್ಯಾಂಕ್ (ನಿ) | 1939 |

ಜಾತಿಯ ನೆಲೆಯಲ್ಲಿ ಬೆಳಕುಕಂಡ ಬ್ಯಾಂಕುಗಳಲ್ಲಿ ಕೆಲವು ಇಲ್ಲಿವೆ :

| | |
|---|---|
| ಜಯಲಕ್ಷ್ಮೀ ಬ್ಯಾಂಕ್ (ನಿ) | 1923 |
| ಕರ್ನಾಟಕ ಬ್ಯಾಂಕ್ (ನಿ) | 1924 |
| ಕೆಥೋಲಿಕ್ ಬ್ಯಾಂಕ್ (ನಿ) | 1925 |
| ದೇವಾಂಗ ಬ್ಯಾಂಕ್ (ನಿ) | 1926 |
| ವೈಶ್ಯ ಬ್ಯಾಂಕ್ (ನಿ) | 1930 |
| ವೈಶ್ಯ ಮರ್ಕೆಂಟೈಲ್ ಬ್ಯಾಂಕ್ (ನಿ) | 1930 |
| ಶ್ರೀಮನ್ ಮಧ್ವಸಿದ್ಧಾಂತ ಅಭಿವೃದ್ಧಿಕಾರಿಣಿ ಬ್ಯಾಂಕ್ (ನಿ) | 1930 |
| ಕಣಿಯರ ಬ್ಯಾಂಕ್ ನಿಯಮಿತ | 1933 |
| ಗುರುಗೋವಿಂದ ಸ್ಪೇಸೀ ಬ್ಯಾಂಕ್ (ನಿ) | 1936 |
| ಒಸ್ಮಾನಿಯಾ ಅಜೀಜ್ ಬ್ಯಾಂಕ್ (ನಿ) | 1936 |

ಪೈ ಮನಿ ಬ್ಯಾಂಕ್ ಲಿಮಿಟೆಡ್ ಒಂದು ಹಿಂದುಳಿದ ವರ್ಗದ ಸದಸ್ಯರಿಂದ ಮಂಗಳೂರಿನಲ್ಲಿ 1934ರಲ್ಲಿ ಸ್ಥಾಪನೆಯಾದ ಬ್ಯಾಂಕು. (ಪೈಗಳಿಗೂ ಈ ಬ್ಯಾಂಕಿಗೂ ಯಾವ ಸಂಬಂಧವೂ ಇಲ್ಲ. ಇಲ್ಲಿರುವ 'ಪೈ' ಆಗಿನ ಒಂದು ನಾಣ್ಯ, ಪೈಸೆ ನಯೆ ಪೈಸೆಗಳ ದೊಡ್ಡಣ್ಣ) ತಮ್ಮ ಜನರಲ್ಲಿ ಸಣ್ಣ ಉಳಿತಾಯದ ಮನೋಭಾವವನ್ನು ಬೆಳೆಸುವ ಸಲುವಾಗಿ ಈ ಬ್ಯಾಂಕು ಹಲವಾರು ಉಳಿತಾಯ ಯೋಜನೆಗಳನ್ನು ರೂಪಿಸಿತ್ತು. 1961ರಲ್ಲಿ ಇದು ಸಿಂಡಿಕೇಟ್ ಬ್ಯಾಂಕಿನೊಂದಿಗೆ ವಿಲೀನಗೊಂಡಿತು.

1949ರ ಬ್ಯಾಂಕಿಂಗ್ ಕಂಪನಿಗಳ ಅಧಿನಿಯಮ ಜಾರಿಗೆ ಬಂದ ಬಳಿಕ ಜಾತಿಯ ಚೌಕಟ್ಟಿನೊಳಗೆ ವ್ಯವಹಾರಗಳನ್ನು ನಡೆಸುವುದು ಕಷ್ಟವಾಯಿತು. ಬ್ಯಾಂಕುಗಳ ಮೂಲಧನದ ಕನಿಷ್ಠ ಮೊತ್ತವನ್ನು ಏರಿಸಿದುದರಿಂದ ಬ್ಯಾಂಕುಗಳು ಎಲ್ಲ ವರ್ಗದ ಜನರಿಂದ ಷೇರು ಬಂಡವಾಳವನ್ನು ಸಂಗ್ರಹಿಸುವ ಆಗತ್ಯ ಉಂಟಾಯಿತು. ಹಣವಿದ್ದವರನ್ನು ಆಕರ್ಷಿಸುವಾಗ ಜಾತಿಯ ನೆಲೆಯಿಂದ ಅವುಗಳು ಹೊರಗೆ ಬರಬೇಕಾಯಿತು.

1961ರ ಬಳಿಕ ಬ್ಯಾಂಕಿಂಗ್ ವ್ಯವಸ್ಥೆಯನ್ನು ಬಲಪಡಿಸುವ ಸಲುವಾಗಿ ರಿಸರ್ವ್ ಬ್ಯಾಂಕು ಕಡ್ಡಾಯವಾಗಿ ಸಣ್ಣ ಬ್ಯಾಂಕುಗಳನ್ನು ದೊಡ್ಡ ಬ್ಯಾಂಕುಗಳೊಂದಿಗೆ ವಿಲೀನಗೊಳಿಸುವ ಕಾರ್ಯಕ್ರಮವನ್ನು ನಿರೂಪಿಸಿತು. ಅನೇಕ ಬ್ಯಾಂಕುಗಳು ದೊಡ್ಡ ಬ್ಯಾಂಕುಗಳೊಂದಿಗೆ ಸೇರಿಕೊಂಡು ತಮ್ಮ ಅಸ್ತಿತ್ವವನ್ನು ಕಳಕೊಂಡುವು. ಬೇರೆಬೇರೆ ಜಾತಿಯ ಜನರಿಂದ ತುಂಬಿದ ಬ್ಯಾಂಕುಗಳು ಒಟ್ಟು ಸೇರಿದಾಗ ಅವು 'ಜಾತ್ಯತೀತ' ಬ್ಯಾಂಕುಗಳಾದುವು.

ರಾಜ್ಯದ ಬ್ಯಾಂಕುಗಳ ಸಂಸ್ಥಾಪಕರಲ್ಲಿ ಅನೇಕ ಸಾಮಾಜಿಕ ರಾಜಕೀಯ ಧುರೀಣರು ಅಗ್ರಗಣ್ಯರಾಗಿದ್ದರು. ಇವರ ಮುಂದಾಳುತನದಲ್ಲಿ ಬ್ಯಾಂಕುಗಳು ಜನರ ವಿಶ್ವಾಸವನ್ನು ಗಳಿಸುವುದು ಸಾಧ್ಯವಾಗಿತ್ತು. ಬ್ಯಾಂಕಿಂಗ್ ಮುತ್ಸದ್ದಿಗಳು ಬೆಳಕಿಗೆ ಬರುವ ಮೊದಲು ಬ್ಯಾಂಕುಗಳಿಗೆ ಚಾಲನ ಶಕ್ತಿಯನ್ನು ನೀಡಿದವರು ಇತರ ವೃತ್ತಿಗಳಲ್ಲಿ ತೊಡಗಿದ್ದು ಬ್ಯಾಂಕುಗಳ ನಿರ್ದೇಶಕ ಮಂಡಳಿಯ ಸದಸ್ಯರಾಗಿ ದುಡಿದವರು. ರಾಜ್ಯದಲ್ಲಿ ಹುಟ್ಟಿದ ಎಲ್ಲಾ ಬ್ಯಾಂಕುಗಳ ಸಂಸ್ಥಾಪಕರ ಯಾದಿಯನ್ನು ತಯಾರಿಸುವುದು ಬಹಳ ಕಷ್ಟಸಾಧ್ಯವಾದ ಕೆಲಸ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹುಟ್ಟಿದ 22 ಬ್ಯಾಂಕುಗಳ ಸಂಸ್ಥಾಪಕರ ಹಿನ್ನೆಲೆಯನ್ನಷ್ಟೇ ವಿಶ್ಲೇಷಣೆ ಮಾಡುವುದು ಸಾಧ್ಯವಿದೆ.

(ಲೇಖಕನ, ದಕ್ಷಿಣ ಕನ್ನಡ ಜಿಲ್ಲೆಯ ಬ್ಯಾಂಕಿಂಗ್ ಉದ್ದಿಮೆಯ ಕುರಿತಾದ, ಸಂಶೋಧನಾ ಗ್ರಂಥದಿಂದ ಆಯ್ದ ವಿವರಗಳ ಆಧಾರದ ಮೇಲೆ ಈ ವಿಶ್ಲೇಷಣೆ ಸಾಧ್ಯವಾಗಿದೆ.)

ದಕ್ಷಿಣ ಕನ್ನಡ ಜಿಲ್ಲೆಯ 22 ಬ್ಯಾಂಕುಗಳ 165 ಸಂಸ್ಥಾಪಕ ನಿರ್ದೇಶಕರಲ್ಲಿ 61 ಭೂಮಾಲೀಕರು ಇದ್ದರು. ಇವರಲ್ಲಿ ಹೆಚ್ಚಿನ

ವರು ಪದವೀಧರರು. ವ್ಯಾಪಾರಿಗಳು 46, ವಕೀಲವೃತ್ತಿಯಲ್ಲಿದ್ದವರು 29 ಜನ. 11 ವೈದ್ಯವೃತ್ತಿಯಲ್ಲಿದ್ದವರೂ ಬ್ಯಾಂಕುಗಳ ಸಂಸ್ಥಾಪಕರಾಗಿದ್ದರು. ಇವರಲ್ಲಿ ಹಲವರು ಬ್ಯಾಂಕುಗಳ ನಿರ್ದೇಶಕ ಮಂಡಳಿಯ ಅಧ್ಯಕ್ಷರಾಗಿ ಜನಪ್ರಿಯರಾಗಿದ್ದರು. ಏಳು ಮಂದಿ ನಿವೃತ್ತ ಸರಕಾರಿ ಅಧಿಕಾರಿಗಳೂ ಇದ್ದರು. ಧಾರ್ಮಿಕ ಸಂಸ್ಥೆಗಳ ಪಾರುಪತ್ಯಗಾರರಾದ 5 ಜನರೂ ಬ್ಯಾಂಕುಗಳ ಸ್ಥಾಪನೆಯಲ್ಲಿ ಪಾಲುಗಾರರಾಗಿದ್ದರು. ಬ್ಯಾಂಕುಗಳ ಶೈಶವದಲ್ಲಿ ಹೆಚ್ಚಿನ ಬ್ಯಾಂಕುಗಳ ನಿರ್ದೇಶಕರು ಯಾವುದೇ ಭತ್ಯವನ್ನು ಬಯಸದೆ ಬ್ಯಾಂಕುಗಳ ಆಡಳಿತೆಯನ್ನು ನಿರ್ವಹಿಸಿರುವುದಕ್ಕೆ ಆಧಾರಗಳಿವೆ. ಇವರು ಬ್ಯಾಂಕುಗಳ ಭದ್ರತೆಗಾಗಿ ತಮ್ಮ ವರ್ಚಸ್ಸನ್ನು ಉಪಯೋಗಿಸಿ, ಅಧಿಕ ಠೇವಣಿ ಸಂಗ್ರಹಮಾಡಿರುವ ನಿದರ್ಶನಗಳೂ ಇವೆ.

## ಬ್ಯಾಂಕುಗಳ ನಿಯಂತ್ರಣ

1949ರಿಂದ 1969ರ ತನಕ ನಡೆದ ಬ್ಯಾಂಕುಗಳ ಬಿಗಿಯಾದ ನಿಯಂತ್ರಣದಿಂದ ಅನೇಕ ಸಣ್ಣ ಬ್ಯಾಂಕುಗಳು ನಿರ್ವಾಣದ ದಾರಿ ಹಿಡಿದವು. ಆರ್ಥಿಕ ಅಸ್ಥಿರತೆಯಿಂದ ದೇಶದ ಇತರ ಭಾಗಗಳಲ್ಲಿ ಬ್ಯಾಂಕುಗಳು ದಿವಾಳಿಯಾದಾಗ ಅದರ ಸೋಂಕು ಕರ್ನಾಟಕದ ಬ್ಯಾಂಕುಗಳಿಗೂ ತಾಗದಿರಲಿಲ್ಲ. ಎರಡು ದಶಕಗಳಲ್ಲಿ 20 ಬ್ಯಾಂಕುಗಳು ತಮ್ಮ ಕದಗಳನ್ನು ಮುಚ್ಚಿದುವು.

ಅರುವತ್ತು ದಶಕಗಳಲ್ಲಿ ರಿಸರ್ವ್ ಬ್ಯಾಂಕಿನ ಆದೇಶದ ಮೇಲೆ ರೂಪುಗೊಂಡ ಬ್ಯಾಂಕುಗಳ ವಿಲೀನೀಕರಣ ಯೋಜನೆಯಲ್ಲಿ ರಾಜ್ಯದ 25 ಸಣ್ಣ ಬ್ಯಾಂಕುಗಳು ದೊಡ್ಡ ಬ್ಯಾಂಕುಗಳೊಂದಿಗೆ ಸೇರಿಕೊಂಡುವು. ಇವುಗಳಲ್ಲಿ 20 ಬ್ಯಾಂಕುಗಳು ರಾಜ್ಯದಲ್ಲೇ ಹುಟ್ಟಿದ ಆರು ಬ್ಯಾಂಕುಗಳೊಂದಿಗೆ ವಿಲೀನವಾದುವು. ಆ ಬ್ಯಾಂಕುಗಳ ವಿವರ ಹೀಗಿದೆ :

| ಬ್ಯಾಂಕು | ಸೇರಿಕೊಂಡ ಬ್ಯಾಂಕು |
|---|---|
| ಸಿಂಡಿಕೇಟ್ ಬ್ಯಾಂಕ್ | 1 ಪೀಪಲ್ಸ್ ಬ್ಯಾಂಕ್ |
| | 2 ಕೆಥೋಲಿಕ್ ಬ್ಯಾಂಕ್ |
| | 3 ಮುಲ್ಕಿ ಬ್ಯಾಂಕ್ |
| | 4 ಬ್ಯಾಂಕ್ ಆಫ್ ಮಂಗಳೂರು |
| | 5 ನಗರ್‌ಕಾರ್ಸ್ ಬ್ಯಾಂಕ್ |
| | 6 ಪೈ ಮನಿ ಬ್ಯಾಂಕ್ |
| | 7 ಸಿಟಿಜನ್ಸ್ ಬ್ಯಾಂಕ್ |
| | 8 ಸದರ್ನ್ ಇಂಡಿಯಾ ಅಪೆಕ್ಸ್ ಬ್ಯಾಂಕ್ |
| | 9 ಮಹಾರಾಷ್ಟ್ರ ಅಪೆಕ್ಸ್ ಬ್ಯಾಂಕ್ |
| ಕೆನರಾ ಬ್ಯಾಂಕ್ | 1 ಪಾಂಗಾಳ ನಾಯಕ್ ಬ್ಯಾಂಕ್ |
| ವಿಜಯಾ ಬ್ಯಾಂಕ್ | 1 ಜಯಲಕ್ಷ್ಮಿ ಬ್ಯಾಂಕ್ |
| | 2 ದೇವಾಂಗ ಬ್ಯಾಂಕ್ |
| | 3 ಏಶ್ಯಾ ಮರ್ಕೆಂಟೈಲ್ ಬ್ಯಾಂಕ್ |
| | 4 ಹುಬ್ಬಳ್ಳಿ ಸಿಟಿ ಬ್ಯಾಂಕ್ |
| ಕರ್ನಾಟಕ ಬ್ಯಾಂಕ್ | 1 ಚಿತ್ರದುರ್ಗ ಬ್ಯಾಂಕ್ |
| | 2 ಶೃಂಗೇರಿ ಶ್ರೀ ಶಾರದಾ ಬ್ಯಾಂಕ್ |
| | 3 ಬ್ಯಾಂಕ್ ಆಫ್ ಕರ್ನಾಟಕ |
| ಸ್ಟೇಟ್ ಬ್ಯಾಂಕ್ ಆಫ್ ಮೈಸೂರು | 1 ಮಲ್ನಾಡ್ ಬ್ಯಾಂಕ್ |
| | 2 ರಾಮದುರ್ಗ ಬ್ಯಾಂಕ್ |
| ಕಾರ್ಪೊರೇಶನ್ ಬ್ಯಾಂಕ್ | 1 ಬ್ಯಾಂಕ್ಆಫ್ ಸಿಟಿಜನ್ |

ಕರ್ನಾಟಕದಲ್ಲಿ ಹುಟ್ಟಿದ ಐದು ಚಿಕ್ಕ ಬ್ಯಾಂಕುಗಳು ರಾಜ್ಯದ ಹೊರಗೆ ಸ್ಥಾಪನೆಯಾದ ಮೂರು ಬ್ಯಾಂಕುಗಳೊಂದಿಗೆ ವಿಲೀನವಾದುವು. ಇವುಗಳಲ್ಲಿ ಮೊದಲೇ ಹೇಳಿದಂತೆ ಉಲ್ಲೇಖನೀಯವಾದುದು ಬೆಳಗಾಂ ಬ್ಯಾಂಕ್‌ನ ವಿಲೀನೀಕರಣ.

ಬ್ಯಾಂಕುಗಳನ್ನು ಆರ್ಥಿಕ ಅಭಿವೃದ್ಧಿಯ ಹರಿಕಾರರನ್ನಾಗಿ ಮಾಡುವ ಉದ್ದೇಶದಿಂದ ಸರಕಾರ ರಿಸರ್ವ್ ಬ್ಯಾಂಕಿನ ಮೂಲಕ ಬ್ಯಾಂಕುಗಳನ್ನು 1968ರಲ್ಲಿ ಸಾಮಾಜಿಕ ನಿಯಂತ್ರಣಕ್ಕೆ ಒಳಪಡಿಸಿತು. ಬ್ಯಾಂಕುಗಳ ಆಡಳಿತ ಮಂಡಳಿಗಳನ್ನು ಪುನರ್ರಚಿಸಿತು. ಸಾಲ ನೀತಿಯನ್ನು ರೂಪಿಸಿ, ಕೆಲವು ಆದ್ಯತಾ ರಂಗಗಳಿಗೆ ದೊರಕಬೇಕಾದ ಸಾಲದ ಮಿತಿಯನ್ನು ನಿಗದಿಪಡಿಸಲಾಯಿತು. ಶಾಖಾ ವಿಸ್ತರಣೆಯ ನಿಯಂತ್ರಣದ ಮೂಲಕ ಗ್ರಾಮೀಣ ಶಾಖೆಗಳಿಗೆ ಪ್ರಾಧಾನ್ಯ ಕೊಡಲಾಯಿತು. ಬ್ಯಾಂಕುಗಳ ವ್ಯವಹಾರದಲ್ಲಿ ಗಮನಾರ್ಹ ಬದಲಾವಣೆಗಳಾದುವು. ಸರಕಾರ ಹಾಕಿದ ಲಕ್ಷ್ಮಣರೇಖೆಯೊಳಗೆ ತಮ್ಮ ವ್ಯವಹಾರಗಳನ್ನು ಬೆಳೆಸುವುದರಲ್ಲಿ ರಾಜ್ಯದ ಬ್ಯಾಂಕುಗಳು ಹಿಂದೆ ಬೀಳಲಿಲ್ಲ.

ಭಾರತ ಸರ್ಕಾರ ಬ್ಯಾಂಕುಗಳ ರಾಷ್ಟ್ರೀಕರಣವನ್ನು ಎರಡು ಕಂತುಗಳಲ್ಲಿ ಮಾಡಿದಾಗ ರಾಜ್ಯದ ನಾಲ್ಕು ಬ್ಯಾಂಕುಗಳು ಸಾರ್ವಜನಿಕ ಕ್ಷೇತ್ರವನ್ನು ಸೇರಿದುವು. 1969ನೆಯ ಜುಲೈ 19ರಂದು ಒಟ್ಟು 14 ಬ್ಯಾಂಕುಗಳ ರಾಷ್ಟ್ರೀಕರಣವಾದಾಗ ಕರ್ನಾಟಕದ ಎರಡು ಬ್ಯಾಂಕುಗಳು—ಕೆನರಾ ಬ್ಯಾಂಕ್ ಮತ್ತು ಸಿಂಡಿಕೇಟ್ ಬಾಂಕ್—ಸೇರಿದ್ದುವು. 1980ರ ಏಪ್ರಿಲ್ 14ರಂದು ಇನ್ನೂ ಆರು ಬ್ಯಾಂಕುಗಳ ರಾಷ್ಟ್ರೀಕರಣವಾದಾಗಲೂ ರಾಜ್ಯದ ಎರಡು ಬ್ಯಾಂಕುಗಳು ಆ ಪಟ್ಟಿಯಲ್ಲಿದ್ದುವು : ವಿಜಯಾ ಬ್ಯಾಂಕ್ ಮತ್ತು ಕಾರ್ಪೊರೇಶನ್ ಬ್ಯಾಂಕ್. ರಾಷ್ಟ್ರೀಕರಣದ ಬಳಿಕ ನಾಲ್ಕೂ ಬ್ಯಾಂಕುಗಳು ಶಾಖಾ ವಿಸ್ತರಣೆಯಲ್ಲಿ, ಆದ್ಯತಾ ರಂಗಗಳಿಗೆ ಮುಂಗಡಗಳನ್ನು ದೊರಕಿಸುವುದರಲ್ಲಿ ಹಾಗೂ ಹಿಂದುಳಿದ ವರ್ಗಗಳಿಗೆ ಆರ್ಥಿಕ ನೆರವು ನೀಡುವುದರಲ್ಲಿ ಪ್ರಶಂಸನೀಯ ಪ್ರಗತಿ ಸಾಧಿಸಿವೆ. ರಾಜ್ಯದ ಹೊರಗೂ ಅವು ತಮ್ಮ ಕಾರ್ಯ ಚಟುವಟಿಕೆಗಳನ್ನು ಬಹಳಷ್ಟು ಪ್ರಮಾಣದಲ್ಲಿ ಬೆಳೆಸಿದುವು.

ಗ್ರಾಮಾಂತರ ಪ್ರದೇಶಗಳಿಗೆ ಅಧಿಕ ಪ್ರಮಾಣದಲ್ಲಿ ಬ್ಯಾಂಕಿಂಗ್ ಸಲವತ್ತುಗಳನ್ನು ಒದಗಿಸುವ ಸಲುವಾಗಿ ಪ್ರತ್ಯೇಕವಾದ ಬ್ಯಾಂಕುಗಳನ್ನು ರಚಿಸುವ ನಿರ್ಧಾರವನ್ನು ಭಾರತ ಸರ್ಕಾರ 1975ನೆಯ ಇಸವಿಯಲ್ಲಿ ಮಾಡಿತು. ಗ್ರಾಮೀಣ ಬ್ಯಾಂಕುಗಳ ಅಧಿನಿಯಮ 1976 ಅನ್ವಯ ಗ್ರಾಮೀಣ ಬ್ಯಾಂಕುಗಳು ದೇಶದ ವಿವಿಧ ಜಿಲ್ಲೆಗಳಲ್ಲಿ ಜನ್ಮ ತಾಳಿದವು. ಈ ಹೊಸ ತಳಿಯ ಬ್ಯಾಂಕುಗಳು ಕೇಂದ್ರ

(ಮುಂದಿನ ಪುಟಕ್ಕೆ)

# ವಿದೇಶಿ ವಿನಿಮಯ ಹಾಗೂ ಕಾಳಸಂತೆ

**ಕೆ. ಎನ್. ಮಹಾಬಲ**

ಇಂದಿನ ದಿನಗಳಲ್ಲಿ ಕಾಳಸಂತೆ ಒಂದು ಸರ್ವವ್ಯಾಪಿ ಪ್ರವೃತ್ತಿ. ಅವಶ್ಯವಸ್ತುವಿನಿಂದ ಹಿಡಿದು ಬೃಹತ್‌ವಸ್ತುವಿನವರೆಗೆ ಕಾಳಸಂತೆಯ ಚಾಲೂಕಿನ ವ್ಯವಹಾರಗಳು ಹರಡಿವೆ. ಅದರಂತೆಯೇ ಅಂತರ ರಾಷ್ಟ್ರೀಯ ವಹಿವಾಟು ವ್ಯಾಪಾರಗಳು ತ್ವರಿತಗತಿಯಲ್ಲಿ ಅಭಿವೃದ್ಧಿ ಹೊಂದುತ್ತಿರುವ ಈ ದಿನಗಳಲ್ಲಿ ಕಾಳಸಂತೆ ವಿದೇಶೀ ವಿನಿಮಯದ ರಂಗದಲ್ಲೂ ತನ್ನ ಕಬಂಧ ಹಸ್ತ ಚಾಚಿದೆ.

### ವಿದೇಶಿ ವಿನಿಮಯ ಎಂದರೇನು?

ವಿದೇಶಿ ವಿನಿಮಯವೆಂದರೆ ನಮ್ಮ ದೇಶದಲ್ಲಿ ಬಳಕೆಯಲ್ಲಿಲ್ಲದ ಚಲಾರ್ಥ (ಕರನ್ಸಿ). ಉದಾಹರಣೆಗೆ ಡಾಲರ್ ಅನ್ನು ನಮ್ಮ ದೇಶದ ಚಲಾರ್ಥಕ್ಕೆ ಪರಿವರ್ತಿಸಿಕೊಳ್ಳುವುದು ಮತ್ತು ತದ್ವಿರುದ್ಧ. ವ್ಯಾಪಾರಿಯೊಬ್ಬ ತಾನು ರಫ್ತು ಮಾಡಿದ ಪದಾರ್ಥಕ್ಕೆ ಪ್ರತಿಯಾಗಿ ಡಾಲರ್‌ಗಳನ್ನು ಪಡೆದಾಗ ಅದನ್ನು ಅವನು ರೂಪಾಯಿಗಳಿಗೆ ಪರಿವರ್ತಿಸಿಕೊಳ್ಳಬೇಕಾಗುತ್ತದೆ. ಯಾವ ದರದಲ್ಲಿ ವಿನಿಮಯ ಮಾಡಿಕೊಳ್ಳಬೇಕಾಗುತ್ತದೆ, ಯಾವ ದರದಲ್ಲಿ ವಿನಿಮಯ ಮಾಡಿಕೊಳ್ಳಬೇಕು ಎಂಬುದು ಪ್ರಾಧಿಕಾರದಿಂದ (ಭಾರತದಲ್ಲಿ ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ) ಸೂಚಿತವಾಗಿರುತ್ತದೆ, ಹಲವಾರು ರೀತಿಯ ನಿಬಂಧನೆಗಳಿಗೂ ಒಳಪಟ್ಟಿರುತ್ತದೆ. ಈ ಹಿನ್ನೆಲೆಯಲ್ಲಿ ವಿದೇಶಿ ವಿನಿಮಯದ ವ್ಯವಹಾರಗಳಲ್ಲಿ ನುಸುಳುವ ಕಾಳಸಂತೆಯ ಸ್ವರೂಪವನ್ನು ಪರಿಚಯಮಾಡಿಕೊಳ್ಳುವ ಮೊದಲು ವಿನಿಮಯ ದರ ನಿಷ್ಕರ್ಷೆಯಾಗುವ ಕ್ರಮವನ್ನು ಅರಿತುಕೊಳ್ಳುವುದು ಅಗತ್ಯ.

### ವಿನಿಮಯ ದರ ನಿಷ್ಕರ್ಷೆ

ವಿನಿಮಯ ಯಾವ ದರದಲ್ಲಿ ನಿಷ್ಕರ್ಷೆಯಾಗಬೇಕು ಎಂಬ ವಿಷಯ ಹಲವಾರು ದಶಕಗಳ ಚರಿತ್ರೆಯ ಹಾದಿಯನ್ನೇ ಬಳಸಿದೆ. ದರವನ್ನು ನಿಷ್ಕರ್ಷೆ ಮಾಡಬಲ್ಲ ಸಾಮಾನ್ಯ ವಸ್ತು ಸರ್ವಸಮ್ಮತವಾಗಿರಬೇಕು ಎಂಬ ಮಾತನ್ನು ಎಲ್ಲ ದೇಶಗಳೂ ಒಪ್ಪಿ ಚಿನ್ನವನ್ನು ಆಧರಿಸಿ ಚಲಾರ್ಥವನ್ನು ಮೌಲ್ಯಮಾಪನ ಮಾಡುವ ಅಂತರ ರಾಷ್ಟ್ರೀಯ ಸುವರ್ಣ ಪ್ರಮಿತಿ (ಇಂಟರ್‌ನ್ಯಾಷನಲ್ ಗೋಲ್ಡ್ ಸ್ಟ್ಯಾಂಡರ್ಡ್) ಜಾರಿಗೆ ಬಂತು. ಇದರಂತೆ ಎಲ್ಲ ದೇಶಗಳೂ ತಂತಮ್ಮ ಚಲಾರ್ಥಗಳನ್ನು ಚಿನ್ನದ ಮೌಲ್ಯಕ್ಕೆ ಸಮೀಕರಿಸಿಕೊಂಡುವು. ಚಲಾರ್ಥವೊಂದಕ್ಕೆ ಅಂತರರಾಷ್ಟ್ರೀಯ ದೃಢತೆಯನ್ನು ನೀಡುವುದು ಸುವರ್ಣ ಸಮಿತಿಯ ಪ್ರಧಾನ ಉದ್ದೇಶವಾಗಿತ್ತು.

ಸುವರ್ಣ ಪ್ರಮಿತಿ ಮೊದಲ ಮಹಾಯುದ್ಧದ ಮುಂಚೆ ಬಹಳ ಚೆನ್ನಾಗಿ ಫಲಿತಾಂಶ ನೀಡಿತು.ಆದರೆ ಮೂವತ್ತರ ದಶಕದ, ಯುದ್ಧದ ಅನಂತರದ ಆಘಾತಗಳನ್ನು ಅದು ತಡೆದುಕೊಳ್ಳದೆ ಅವಸಾನ ಹೊಂದಿತು. ಆಮೇಲೆ ಪ್ರಧಾನ ಚಲಾರ್ಥಗಳೆಂದು (ಕೀ ಕರನ್ಸಿ) ಮಾನ್ಯತೆಪಡೆದಿದ್ದ ಪೌಂಡ್ ಸ್ಟರ್ಲಿಂಗ್ ಮತ್ತು ಅಮೆರಿಕನ್ ಡಾಲರ್ ಆಧರಿಸಿ ಎಲ್ಲ ದೇಶಗಳ ಚಲಾರ್ಥಗಳ ಬೆಲೆ ನಿರ್ಧರಿಸುವ ಕಾರ್ಯ ಮೊದಲಾಯಿತು. 'ಚಿನ್ನ ಸಮಾನ'ವಾಗಿದ್ದ ಈ ಪ್ರಧಾನ ಚಲಾರ್ಥಗಳು ಬಹುಬೇಗ ಯಶಸ್ವಿಯಾದವು; ಅದರಲ್ಲೂ ಡಾಲರ್ ಅಂತೂ ಎರಡನೆಯ ಮಹಾಯುದ್ಧದ ಅನಂತರ ಉಚ್ಛ್ರಾಯ ಮಟ್ಟವನ್ನೇ ತಲುಪಿತು.

ಕಾಲಕ್ರಮದಲ್ಲಿ ಮತ್ತಷ್ಟು ಸುಧಾರಣೆಯ ದ್ಯೋತಕವಾಗಿ ಈಗ 'ಬ್ರೆಟನ್‌ವುಡ್ಸ್' ಪದ್ಧತಿ ಎಂದು ಜನಪ್ರಿಯವಾಗಿರುವ ಅಂತರರಾಷ್ಟ್ರೀಯ ಹಣಕಾಸು ನಿಧಿಯ ನಿಯಮಗಳು ಜಾರಿಗೆ ಬಂದವು. ಇದರಂತೆ ಚಿನ್ನ ಮತ್ತು ಡಾಲರ' ಆಧರಿಸಿ ಸಮಮೌಲ್ಯ (ಪಾರ್ ವ್ಯಾಲ್ಯೂ) ನಿಷ್ಕರ್ಷೆಯಾಗುತ್ತಿತ್ತು. 1971ರ ಡಾಲರ್ ಕುಸಿತ ಅಂತರ ರಾಷ್ಟ್ರೀಯ ಹಣಕಾಸು ನಿಧಿಯನ್ನು ಮತ್ತೆ ಚಿಂತನೆಗೀಡುಮಾಡಿ, ಚಲಾರ್ಥವೊಂದಕ್ಕೆ ಅಂತರ ರಾಷ್ಟ್ರೀಯ ಸ್ಥಿರತೆ, ದ್ರವತ್ವ ತಂದುಕೊಡುವ ಯತ್ನವಾಗಿ ವಿಶೇಷ ಡ್ರಾಯಿಂಗ್ ಹಕ್ಕು (ವಿಡ್ರಾಹ)ಗಳ, ಚಲಾವಣೆ ಜಾರಿಗೆ ಬಂತು. ಹಲವಾರು ಪ್ರಮುಖ ಚಲಾರ್ಥಗಳ ಬಲ ಹೊಂದಿರುವ ವಿಡ್ರಾಹಗಳು ಇಂದು ಸರ್ವಮಾನ್ಯ. ಸ್ಥೂಲವಾಗಿ ಇದು ವಿನಿಮಯ ದರ ಹಾದುಬಂದಿರುವ ಘಟನಾತ್ಮಕ ಹಾದಿ.

ಇದರಂತೆ ಪ್ರತಿಯೊಂದು ಕೇಂದ್ರ ಬ್ಯಾಂಕೂ (ಭಾರತದಲ್ಲಿ ರಿಸರ್ವ್ ಬ್ಯಾಂಕ್) ತನ್ನ ದೇಶದ ಚಲಾರ್ಥವನ್ನು ಯಾವ ದರದಲ್ಲಿ ಪರಿವರ್ತನೆಮಾಡಿಕೊಳ್ಳಬಹುದು ಎಂಬ ದರಗಳನ್ನು ಸೂಚಿಸುತ್ತದೆ.

ಕೆ. ಎನ್. ಮಹಾಬಲ, ಭಾರತೀಯ ಸ್ಟೇಟ್ ಬ್ಯಾಂಕ್, ಬನಶಂಕರಿ ಎರಡನೆಯ ಘಟ್ಟ, ಬೆಂಗಳೂರು 560 070

---

(ಹಿಂದಿನ ಪುಟದಿಂದ)

ಸರ್ಕಾರ, ರಾಜ್ಯ ಸರ್ಕಾರ ಹಾಗೂ ಒಂದು ರಾಷ್ಟ್ರೀಕೃತ ಬ್ಯಾಂಕಿನ ಪಾಲುಗಾರಿಕೆಯಲ್ಲಿ ಅಸ್ತಿತ್ವಕ್ಕೆ ಬಂದುವು. ಇವುಗಳ ಕಾರ್ಯಕ್ಷೇತ್ರವನ್ನು ಒಂದು ಅಥವಾ ಎರಡು ಜಿಲ್ಲೆಗಳಿಗೆ ಮಾತ್ರ ಸೀಮಿತಗೊಳಿಸಲಾಯಿತು. ಕೇವಲ ಗ್ರಾಮಾಂತರ ಪ್ರದೇಶಗಳಲ್ಲಿ ತಮ್ಮ ಶಾಖೆಗಳನ್ನು ತೆರೆದು ಸಣ್ಣ ರೈತರಿಗೆ, ಬೇಸಾಯದ ಕೂಲಿಗಾರರಿಗೆ ಮತ್ತು ಆರ್ಥಿಕವಾಗಿ ಹಿಂದುಳಿದವರಿಗೆ ಮಾತ್ರ ಇವು ಆರ್ಥಿಕ ನೆರವನ್ನು ನೀಡತಕ್ಕದ್ದು ಎಂದು ನಿಗದಿಪಡಿಸಲಾಯಿತು. 1976 ರಿಂದ 1985ರ ಅವಧಿಯಲ್ಲಿ ರಾಜ್ಯದಲ್ಲಿ 13 ಗ್ರಾಮೀಣ ಬ್ಯಾಂಕುಗಳು ಸ್ಥಾಪನೆಗೊಂಡವು. ಎಲ್ಲಾ ಜಿಲ್ಲೆಗಳಿಗೂ ಗ್ರಾಮೀಣ ಬ್ಯಾಂಕುಗಳನ್ನು ಪಸರಿಸಿದ ರಾಜ್ಯ ಇಡೀ ದೇಶದಲ್ಲಿ ಕರ್ನಾಟಕ ಒಂದೇ ಆಗಿರುತ್ತದೆ. ವಾಣಿಜ್ಯ ಬ್ಯಾಂಕುಗಳ ಸ್ಥಾಪನೆಯಲ್ಲಿ ಖಾಸಗಿ ರಂಗದ ಧುರೀಣರು ಹಿಂದೆ ಮುತುವರ್ಜಿಯಿಂದ ಶ್ರಮಿಸಿದ್ದರೆ, ಇತ್ತೀಚಿಗಿನ ಸಮಯದಲ್ಲಿ ಗ್ರಾಮೀಣ ಬ್ಯಾಂಕುಗಳ ವಿಸ್ತರಣೆಯಲ್ಲಿ ಸರ್ಕಾರವೂ ಸರ್ಕಾರಿ ರಂಗದ ಬ್ಯಾಂಕುಗಳೂ ಪ್ರಮುಖ ಪಾತ್ರ ವಹಿಸಿವೆ.

ಕನ್ನಡದ ನೆಲದಲ್ಲಿ ಬೆಳೆದ ಬ್ಯಾಂಕುಗಳು ಸಾಕಷ್ಟು ಕೆಲಸಮಾಡಿವೆ. ನಾಡಿನ ಬೆಳವಣಿಗೆಯಲ್ಲಿ ಜತೆಗಾರರಂತೆ ನಡೆದುಕೊಂಡಿವೆ. ಇಲ್ಲಿ ಬೆಳೆದ ಬ್ಯಾಂಕುಗಳು ತಮ್ಮದೇ ಆದ ಒಂದು ಪರಂಪರೆಯನ್ನು ಬೆಳೆಸಿವೆ. ಅಳಿದು ಉಳಿದ ಬ್ಯಾಂಕುಗಳು ಯಾವ ಮಟ್ಟಕ್ಕೆ ಏರಿದರೂ ಎಷ್ಟೇ ಮಾರ್ಪಾಟು ಹೊಂದಿದರೂ ತಮ್ಮತನವನ್ನು ಉಳಿಸಿಕೊಂಡಿವೆ, ಜನರ ಪ್ರೀತಿ ವಿಶ್ವಾಸ ಗಳಿಸಿವೆ.

ಇದರನ್ವಯ ದೇಶದ ಎಲ್ಲಾ ಬ್ಯಾಂಕುಗಳೂ (ಅಧಿಕೃತ ವಹಿವಾಟುದಾರರು) ಈ ಅಧಿಕೃತ ದರದಲ್ಲೆ ತಂತಮ್ಮ ವಿದೇಶಿ ವ್ಯವಹಾರವನ್ನು ನಡೆಸಬೇಕಾಗುತ್ತದೆ. ವಿದೇಶಿ ವ್ಯಾಪಾರದಲ್ಲಿ ತೊಡಗಿರುವ ವ್ಯಾಪಾರಿಯೇ ಆಗಲಿ, ಪ್ರವಾಸಿಯೇ ಆಗಲಿ, ಯಾರೇ ಆಗಲಿ ತಮ್ಮ ಎಲ್ಲಾ ವ್ಯವಹಾರಗಳನ್ನೂ ಅಧಿಕೃತ ವಹಿವಾಟುದಾರರ ಮೂಲಕವೇ ನಡೆಸಬೇಕು. ಅದು ರಿಸರ್ವ್ ಬ್ಯಾಂಕ್ ನೀಡಿರುವ ಅನುಜ್ಞೆಗೆ(ಪರ್ಮಿಟ್)ಅನುಸಾರವೇ. ವಿನಿಮಯ ಮೌಲ್ಯದಲ್ಲಾಗಲಿ, ಮತ್ತಾವುದೇ ರೀತಿಯಲ್ಲಾಗಲಿ ಯಾವುದೇ ಮಾರ್ಪಾಡುಗಳಿಗೆ ಅಲ್ಲಿ ಅವಕಾಶವೇ ಇಲ್ಲ. ಹಾಗಾದರೆ ವಿದೇಶಿ ವಿನಿಮಯ ರಂಗದಲ್ಲಿ ಕಾಳಸಂತೆ ವ್ಯವಹಾರಗಳು ಹೆಚ್ಚಲು ಕಾರಣವೇನು ? ಇದು ಎದುರಾಗುವ ಪ್ರಶ್ನೆ. ಒಂದು ವಸ್ತು ಅತಿ ಹೆಚ್ಚು ಬೇಡಿಕೆಯನ್ನು ಪಡೆದಾಗ, ಅದರ ಪೂರೈಕೆ ಕಡಿಮೆ ಮಟ್ಟದಲ್ಲಿದ್ದಾಗ ಅಥವಾ ಒಂದು ವಸ್ತುವಿನ ಸಂಗ್ರಹ ದೇಶದ ಅರ್ಥವ್ಯವಸ್ಥೆಯ ಮೇಲೆ ಸೂಕ್ಷ್ಮತರ ಪರಿಣಾಮ ಉಂಟುಮಾಡುವಂತಿದ್ದಾಗ (ವಿದೇಶಿ ವಿನಿಮಯ ಅಂತಹ ವಸ್ತು) ನಿಯಂತ್ರಣದ ಕ್ರಮಗಳು ಸ್ವಾಭಾವಿಕವಾಗಿ ಜಾರಿಗೆ ಬರುತ್ತವೆ. ಬೇಡಿಕೆ ಹೆಚ್ಚಿರುವಾಗ ನಿಯಂತ್ರಣದ ಕ್ರಮಗಳಿಂದ ಪೂರೈಕೆ ಕಡಿಮೆಯಾಗುತ್ತವೆ. ಅಗತ್ಯವಿರುವ ಜನ ಬೇಡಿಕೆಗಳನ್ನು ಪೂರೈಸಿಕೊಳ್ಳಲು ಅನಧಿಕೃತ ದಾರಿಗಳಿಗೆ ಶರಣಾಗುತ್ತಾರೆ. ಕಳ್ಳದಾಸ್ತಾನು ಮಾಡಿರುವವರು ಅದನ್ನು ಅನಧಿಕೃತ ಅಥವಾ ಸಮಾಂತರ ಮಾರುಕಟ್ಟೆಯಲ್ಲಿ ಅಥವಾ ಕಾಳಸಂತೆಯಲ್ಲಿ ಪೂರೈಸಲು ಬರುತ್ತಾರೆ. ಈ ಬೇಡಿಕೆ-ಪೂರೈಕೆಗಳ ಅಸಿಂಧು ಕೂಟ ಕಾಳಸಂತೆಯನ್ನು ಸೃಷ್ಟಿಸುತ್ತದೆ.

## ವಿದೇಶಿ ವ್ಯವಹಾರದಲ್ಲಿ ಕಾಳಸಂತೆ ಹೇಗೆ?

(ಅ) ವಿದೇಶಿ ಸರಕುಗಳ ಮೋಹ ಮತ್ತು ವಿದೇಶ ಯಾತ್ರೆ : ವಿದೇಶಿ ವಸ್ತುಗಳ ಬಗ್ಗೆ ನಮ್ಮ ಜನಕ್ಕೆ ಇರುವ ಮೋಹ ಕಾಳಸಂತೆಯ ಸೃಷ್ಟಿಗೆ ಪ್ರಬಲ ಕಾರಣಗಳಲ್ಲೊಂದಾಗಿದೆ ವಿದೇಶಿ ವಸ್ತುಗಳ ಮೇಲಿನ ಅತಿ ಪ್ರತಿಷ್ಠೆ, ಗುಣಮಟ್ಟದ ಬಗ್ಗೆ ಪೊಳ್ಳು ವಿಶ್ವಾಸ ಇವು ಈ ವಸ್ತುಗಳನ್ನು ತಂದುಕೊಡುವವರನ್ನು ಸೃಷ್ಟಿಸಿವೆ. ಸಿಂಗಪುರ, ಹಾಂಗ್‌ಕಾಂಗ್ ದೇಶಗಳ ಪ್ರವಾಸದ ಆಮಿಷ ತೋರಿಸಿ ಕರೆದೊಯ್ದು ವಿದೇಶಿ ಸರಕುಗಳನ್ನು ಒಳತರುವ ಪ್ರವೃತ್ತಿ ಹೆಚ್ಚಾಗಿದೆ. ರಿಸರ್ವ್ ಬ್ಯಾಂಕಿನ ಕಣ್ಣು ತಪ್ಪಿಸಿ ಅಪಾರ ಪ್ರಮಾಣದ ವಿನಿಮಯ ಈ ನಿಟ್ಟಿನಲ್ಲಿ ಹರಿದುಹೋಗುತ್ತಿದೆ.

(ಆ) ವಿದೇಶಿ ವಿನಿಮಯದ ಕಳ್ಳರವಾನೆ: ವಿದೇಶಿ ವಿನಿಮಯದ ಕಳ್ಳರವಾನೆಯೂ ಇಂದು ಮಹತ್ವದ ಪ್ರಮಾಣದಲ್ಲಿ ನಡೆಯುತ್ತಿದ್ದು, ಅಮೂಲ್ಯ ವಿದೇಶಿ ವಿನಿಮಯ ದೇಶದಿಂದ ಹೊರಕ್ಕೆ ಹರಿದುಹೋಗುತ್ತಿದೆ. ಇತ್ತೀಚೆಗೆ ಗುಜರಾತಿನ ಪ್ರಮುಖ ವಾಣಿಜ್ಯೋದ್ಯಮಿಯೊಬ್ಬರು ಇಂತಹ ಪ್ರಕರಣದಲ್ಲಿ ಸಿಕ್ಕಿಬಿದ್ದಿದ್ದರು. ಡಾಲರ್ ಪೌಂಡ್‌ಗಳಂತಹ 'ಬಹುಮಾನ್ಯ' ಚಲಾರ್ಥಗಳನ್ನು ದೇಶದ ಹೊರಕ್ಕೆ ಸಾಗಿಸಲು ವಿಶೇಷ ವಾಹಕ ವ್ಯವಸ್ಥೆಯೊಂದನ್ನೇ ಅವರು ಹೊಂದಿದ್ದರೆಂದು ವರದಿಯಾಗಿತ್ತು. ಈ ಚಲಾರ್ಥಗಳು ವಿಶೇಷವಾಗಿ ಸಿಂಗಪುರ ಹಾಂಗ್‌ಕಾಂಗ್‌ಗಳಲ್ಲಿ ಬಟವಾಡೆಯಾಗುತ್ತಿದ್ದುವಂತೆ.

(ಇ) ಬಿಕರಿ ಪಟ್ಟಿಯಲ್ಲಿನ (ಇನ್‌ವಾಯ್ಸ್) ವ್ಯತ್ಯಾಸ : ಆಮದು ರಫ್ತು ವ್ಯಾಪಾರದಲ್ಲಿ ಏರುಪೇರುಮಾಡಿ ಕಸ್ಟಮ್ಸ್ ಶುಲ್ಕ ವಂಚಿಸುವುದೂ ವಿದೇಶಿ ವಿನಿಮಯದ ಕಾಳಸಂತೆಯ ಒಂದು ವಿಧಾನವಾಗಿದೆ. ಇತ್ತೀಚೆಗೆ ಸುಂಕದ ದಳದವರು ಹಲವಾರು ಪ್ರಮುಖ ಕಂಪನಿಗಳ ಮೇಲೆ ದಾಳಿ ನಡೆಸಿ, ವಿದೇಶಿ ವ್ಯಾಪಾರದಲ್ಲಿ ಸುಂಕ ವಂಚಿಸಿದ ಆಪಾದನೆ ಮೇಲೆ ಅಲ್ಲಿನ ಲೆಕ್ಕಪತ್ರಗಳನ್ನು ವಶಪಡಿಸಿಕೊಂಡರು. ಬಿಕರಿ ಪಟ್ಟಿಯಲ್ಲಿ ಕಡಿಮೆ ಮೌಲ್ಯ ತೋರಿಸಿ, ರಫ್ತುದಾರನಿಗೆ ಬಾಕಿ ಇರುವ ಉಳಿದ ಹಣವನ್ನು ವಿದೇಶಿ ಬ್ಯಾಂಕುಗಳಲ್ಲಿನ ಖಾತೆಯಿಂದ ಪಾವತಿಮಾಡುತ್ತಿದ್ದರೆಂದು ಪ್ರಾಥಮಿಕ ತನಿಖೆಗಳು ವಿವರಿಸಿದುವು. ಭಾರತದಲ್ಲಿ ವಿದೇಶಿ ವಿನಿಮಯ ಬಿಡುಗಡೆ ಮಾಡುವ ಪ್ರಾಧಿಕಾರ ರಿಸರ್ವ್ ಬ್ಯಾಂಕ್ ಒಂದೇ ಆಗಿರುವುದರಿಂದ ವಿದೇಶಿ ಬ್ಯಾಂಕುಗಳಲ್ಲಿ ಕಂಪನಿಗಳು ಇಷ್ಟು ದೊಡ್ಡ ಶಿಲ್ಕನ್ನು ಹೊಂದಲು ಹೇಗೆ ಸಾಧ್ಯ ಎಂಬ ಚರ್ಚೆಯೂ ಇಂದು ನಡೆಯುತ್ತಿದೆ.

(ಈ) ಇತರ ಕ್ರಮಗಳು : ಇದರ ಜತೆಗೆ ಇನ್ನೂ ಹಲವಾರು ರೀತಿಯಲ್ಲಿ ವಿದೇಶಿ ವಿನಿಮಯದ ಕಾಳಸಂತೆ ನಡೆಯುತ್ತಿದೆ :

(೧) ವಿದೇಶದಿಂದ ಹಿಂತಿರುಗಿದವರು ತಮ್ಮಲ್ಲಿ ಉಳಿದ ವಿದೇಶಿ ಹಣವನ್ನು ಮರಳಿ ರಿಸರ್ವ್ ಬ್ಯಾಂಕಿಗೆ ಒಪ್ಪಿಸದೆ, ಕಾಳಸಂತೆಯಲ್ಲಿ ವಿಲೆ ಮಾಡುತ್ತಾರೆ. ಇಂತಹ ವಿದೇಶಿ ಹಣದ ಪ್ರಮಾಣ ಗೌಣವಿರಬಹುದು. ಆದರೆ ಇದೂ ಒಂದು ಕಾಳಸಂತೆಯ ಕ್ರಮವಾಗಿದೆ.

(೨) ಅನಿವಾಸಿ ಖಾತೆಗಳಲ್ಲೂ ಹಲವಾರು ರೀತಿಯಲ್ಲಿ ವಿದೇಶಿ ವಿನಿಮಯದ ಪೋಲು ನಡೆಯುತ್ತಿರುವ ಪ್ರಕರಣಗಳಿವೆ.

(೩) ಹೆರಾಯಿನ್ ಮುಂತಾದ ಮಾದಕ ವಸ್ತುಗಳ ಕಳ್ಳಸಾಗಣೆ, ಅದಕ್ಕೆ ಪಾವತಿಯಾಗಿ ಡಾಲರ್ ಪೌಂಡ್ ವಿನಿಮಯ, ಇಂತಹವೂ ವಿದೇಶಿ ವಿನಿಮಯದ ಕಾಳಸಂತೆಗಳನ್ನು ಸೃಷ್ಟಿಸಿವೆ ಎನ್ನಲಾಗಿದೆ.

## ನಿಯಂತ್ರಣದ ಕ್ರಮಗಳು ಅಗತ್ಯವೆ?

ವಿದೇಶಿ ವಿನಿಮಯದ ವ್ಯವಹಾರ ಬಹುತೇಕ ಎಲ್ಲ ರಾಷ್ಟ್ರಗಳಲ್ಲಿ ನಿಯಂತ್ರಣಕ್ಕೆ ಒಳಪಟ್ಟಿದೆ. ಆಂತರಿಕ ಅಭಿವೃದ್ಧಿಯಂತೆಯೇ ಮಾರುಕಟ್ಟೆಯ ಅಭಿವೃದ್ಧಿಯ ದೃಷ್ಟಿಯನ್ನೂ ಕರ್ತವ್ಯವನ್ನೂ ಹೊಂದಿರುವ ಕೇಂದ್ರ ಬ್ಯಾಂಕುಗಳು ನಿಯಂತ್ರಿಸುವ ಪ್ರಾಧಿಕಾರಗಳಾಗಿವೆ. ಅದರಲ್ಲೂ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಸ್ಥಿರತೆ ಮತ್ತು ದೃಢತೆಯನ್ನು ಕಾಪಾಡಿಕೊಂಡು ಬರುವುದು ಸೂಕ್ಷ್ಮವಾದ ಕೆಲಸ. ಈ ದೃಷ್ಟಿಯಿಂದ ಕೇಂದ್ರ ಬ್ಯಾಂಕು ವಿದೇಶಿ ವಿನಿಮಯದ ಹರಿವಿನ ಮೇಲೆ ಎಚ್ಚರ ವಹಿಸುವುದು ಸ್ವಾಭಾವಿಕವಾಗಿದೆ. ಅಗತ್ಯವಾದ ವಸ್ತುಗಳಿಗೆ, ಸೇವೆಗಳಿಗೆ ಮಾತ್ರ ವಿನಿಮಯವನ್ನು ಬಿಡುಗಡೆ ಮಾಡುವುದು, ಅಮೂಲ್ಯ ವಿದೇಶಿ ವಿನಿಮಯ ಮೀಸಲುಗಳ ಪ್ರಮಾಣವನ್ನು ಕಾಯ್ದುಕೊಳ್ಳುವುದು ಅದರ ಕರ್ತವ್ಯವಾಗಿದೆ.

ಇದಕ್ಕೆ ಪ್ರತಿಯಾಗಿ ಹಲವು ದೇಶಗಳಲ್ಲಿ ವಿದೇಶಿ ವಿನಿಮಯ ಕಟ್ಟುಪಾಡುಗಳು ಇರುವುದೇ ಇಲ್ಲ, ಇದ್ದರೂ ಅದು ಕಡಿಮೆ ಪ್ರಮಾಣದಲ್ಲಿರುತ್ತದೆ. ಉದಾಹರಣೆಗೆ ಸಿಂಗಪುರ, ಹಾಂಗ್‌ಕಾಂಗ್. ಹಾಗಾಗಿ ಅಲ್ಲಿನ ವಿದೇಶಿ ವಿನಿಮಯದ ರಿಯಾಯಿತಿಗಳ ಲಾಭ ಪಡೆದು, ಭಾರತದಂತಹ ದೇಶದಲ್ಲಿ ಅಲ್ಲಿಂದ ತಂದ ಸರಕುಗಳ ವಿಲೆ ನಡೆಯುತ್ತದೆ. ನಿಯಂತ್ರಣದ ಕಣ್ಣು ತಪ್ಪಿಸಿ ವಿದೇಶಿ ವಿನಿಮಯದ ಕಾಳಸಂತೆ ಸೃಷ್ಟಿಯಾಗುತ್ತದೆ.

ಹಾಗಾದರೆ ವಿದೇಶಿ ವಿನಿಮಯದಲ್ಲಿ ನಿಯಂತ್ರಣವಿದ್ದಲ್ಲಿ ಕಾಳಸಂತೆ ಸೃಷ್ಟಿಯಾಗುತ್ತದೆ. ಕೆಲವು ದೇಶದಲ್ಲಿ ಮುಕ್ತ ವ್ಯವಸ್ಥೆ ಇರುವುದರಿಂದ ಭಾರತದಂತಹ ದೇಶದಲ್ಲೂ ಕಟ್ಟುಪಾಡುಗಳು

(ಮುಂದಿನ ಪುಟಕ್ಕೆ)

# ಬ್ಯಾಂಕುಗಳಲ್ಲಿ ಉದರಿ ಆಯೋಜನೆ

**ಜಿ. ಎನ್. ನರಸಿಂಹಮೂರ್ತಿ**

ಭಾರತದಲ್ಲಿ ಉದರಿ ಆಯೋಜನೆ ಇತ್ತೀಚೆಗೆ ಪ್ರಾಧಾನ್ಯ ಗಳಿಸಿಕೊಳ್ಳುತ್ತಿರುವ ವಿಷಯ. 1968ರ ಫೆಬ್ರವರಿಯಲ್ಲಿ ರಾಷ್ಟ್ರೀಯ ಉದರಿ ಮಂಡಲಿ (National Credit Council) ರೂಪುಗೊಳ್ಳುವವರೆಗೆ ಉದರಿಯೆಂಬುದು ಬ್ಯಾಂಕುಗಳು ತಮ್ಮಿಷ್ಟಕ್ಕೆ ತಾವು ತಮ್ಮ ಅನುಕೂಲಕ್ಕೆ ತಕ್ಕಂತೆ ನೀಡಬಹುದಾದ, ಅವರಿಗೆ ಲಾಭದಾಯಕವಾದ ಸಾಧನವಾಗಿತ್ತು. ರಾಷ್ಟ್ರೀಯ ಉದರಿ ಮಂಡಳಿ ರೂಪುಗೊಂಡ ಅನಂತರ ಅದು ಬ್ಯಾಂಕುಗಳು ಇಂತಿಂತಹ ಕ್ಷೇತ್ರಗಳಿಗೆ ಇಂತಿಷ್ಟು ಉದರಿ ನೀಡಬೇಕೆಂದು ನಿರ್ದೇಶನ ನೀಡಲು ಪ್ರಾರಂಭಿಸಿತು. ಇದು ಒಂದು ರೀತಿಯಲ್ಲಿ ಉದರಿ ನೀಡಿಕೆಯಲ್ಲಿ ಕೊಂಚ ಬದಲಾವಣೆ ತಂದರೂ, ಕೇವಲ ಕ್ಷೇತ್ರವಾರು ಉದರಿ ಹಂಚಿಕೆಯಲ್ಲಿ, ಬ್ಯಾಂಕುಗಳು ತಮಗೆ ಬಂದ ಆದೇಶದಲ್ಲಿನ ಗುರಿಗಳನ್ನು ತಲಪುವದರಲ್ಲಿ ಪರ್ಯವಸಾನವಾಯಿತು.

1970ರಲ್ಲಿ ಭಾರತೀಯ ರಿಸರ್ವ್ ಬ್ಯಾಂಕಿನಲ್ಲಿ ಉದರಿ ಆಯೋಜನಾ ವಿಭಾಗ (Credit Planning Cell) ಪ್ರಾರಂಭವಾದ ಅನಂತರ ಉದರಿ ಆಯೋಜನೆ ಬ್ಯಾಂಕುಗಳಲ್ಲಿಯೂ ಒಂದು ಪ್ರತ್ಯೇಕ ಸ್ಥಾನವನ್ನು ಗಳಿಸಿಕೊಂಡಿತು. ದೇಶದ ಒಟ್ಟು ಸಂಪನ್ಮೂಲವನ್ನು ಸರಿಯಾಗಿ ಅಂದಾಜು ಮಾಡಿ ಅದನ್ನು ದೇಶದ ಸರ್ವಾಂಗೀಣ ಪ್ರಗತಿಗೆ ಅನುವಾಗುವಂತೆ ಬಳಸಲು, ಎಲ್ಲ ತರಹದ ಪ್ರಾದೇಶಿಕ ಅಸಮಾನತೆಗಳನ್ನು ತೊಡೆದುಹಾಕುವಂತೆ ಉದರಿಯ ಹರಿವು ಹಾಗೂ ಉದರಿಯ ಬಳಕೆಯಿಂದ ಕೇವಲ ಕೆಲ ಕ್ಷೇತ್ರಗಳು, ಕೆಲ ಪ್ರದೇಶಗಳು ಮಾತ್ರ ಅಭಿವೃದ್ಧಿ ಹೊಂದದೆ ಇಡೀ ದೇಶವೇ ಅಭ್ಯುದಯ ಪಥದಲ್ಲಿ ಸಾಗುವಂತೆ ಮಾಡಲು ಉತ್ತಮವಾದ, ವ್ಯಾಪಕವಾದ ಉದರಿ ಆಯೋಜನೆ ಅತ್ಯಂತ ಆವಶ್ಯಕವಾಗಿರುತ್ತದೆ.

ಉದರಿ ಆಯೋಜನೆಯನ್ನು ಎರಡು ಹಂತಗಳಲ್ಲಿ ರೂಪಿಸಬೇಕಾಗುತ್ತದೆ: (1) ಸ್ಥೂಲ ಉದರಿ ಯೋಜನೆ. (2) ಸೂಕ್ಷ್ಮ ಉದರಿ ಆಯೋಜನೆ.

ಜಿ. ಎನ್. ನರಸಿಂಹಮೂರ್ತಿ, ಭಾರತೀಯ ಸ್ಟೇಟ್ ಬ್ಯಾಂಕ್, ನಗರ ಮಾರುಕಟ್ಟೆ ಶಾಖೆ, ಬೆಂಗಳೂರು

### ಸ್ಥೂಲ ಉದರಿ ಯೋಜನೆ

ಇದನ್ನು ಮುಖ್ಯವಾಗಿ ಭಾರತೀಯ ರಿಸರ್ವ್ ಬ್ಯಾಂಕ್ ರೂಪಿಸುತ್ತದೆ. ಅದು ಈ ಅಂಶಗಳನ್ನು ಮುಖ್ಯವಾಗಿ ಗಮನಿಸಬೇಕಾಗುತ್ತದೆ.

ಅ ಉದರಿಯಾಗಿ ನೀಡಬಹುದಾದ, ಬ್ಯಾಂಕುಗಳು ಸಂಗ್ರಹಿಸಿದ ಠೇವಣಿಗಳು,
ಆ ಸರ್ಕಾರಕ್ಕೆ ನೇರವಾಗಿ ನೀಡಬೇಕಾದ ಉದರಿಯ ಪ್ರಮಾಣ,
ಇ ವಾಣಿಜ್ಯ ಕ್ಷೇತ್ರಕ್ಕೆ ನೀಡಬೇಕಾದ ಉದರಿಯ ಪ್ರಮಾಣ,
ಈ ಬ್ಯಾಂಕಿಂಗ್ ವಲಯದಲ್ಲಿನ ವಿದೇಶಿ ವಿನಿಮಯ ಆಸ್ತಿಯ ಪ್ರಮಾಣ,
ಉ ಕೈಗಾರಿಕೆ, ಕೃಷಿ, ವಿದೇಶಿ ವ್ಯವಹಾರ ಇತ್ಯಾದಿಗಳ ಬಗೆಗೆ ಸರ್ಕಾರದ ನೀತಿಗಳು,
ಊ ರಾಷ್ಟ್ರೀಯ ಪಂಚವಾರ್ಷಿಕ ಯೋಜನೆಗಳು,
ಋ ವಿವಿಧ ಕೈಗಾರಿಕೆಗಳು ಬಳಸಿಕೊಳ್ಳುವ ಉದರಿಯ ಬಗೆಗಿನ ದತ್ತಾಂಶಗಳು.

ಈ ಎಲ್ಲ ಅಂಶಗಳ ಬಗೆಗೆ ಸಾಕಷ್ಟು ಮಾಹಿತಿ ಸಂಗ್ರಹಿಸಿ ಅದರ ಆಧಾರದ ಮೇಲೆ ರಿಸರ್ವ್ ಬ್ಯಾಂಕಿನ ಉದರಿ ಆಯೋಜನಾ ವಿಭಾಗ ಸಿದ್ಧಪಡಿಸಿದ ಯೋಜನೆಯನ್ನು ಇತರ ಎಲ್ಲ ಬ್ಯಾಂಕುಗಳು ಹಾಗೂ ಐ.ಡಿ.ಬಿ.ಐ., ನಬಾರ್ಡ್, ರಾಜ್ಯದ ಹಣಕಾಸು ಸಂಸ್ಥೆಗಳು, ಐ.ಸಿ.ಐ.ಸಿ.ಐ. ಮುಂತಾದ ಹಣಕಾಸು ಸಂಸ್ಥೆಗಳ ಪ್ರತಿನಿಧಿಗಳ ಮುಂದಿಟ್ಟು, ಅವರು ಸ್ವತಃ ತಯಾರಿಸಿದ ಉದರಿ ಯೋಜನೆಯೊಂದಿಗೆ ತುಲನೆಮಾಡಿ ಬದಲಾವಣೆಗಳಿದ್ದಲ್ಲಿ ಬ್ಯಾಂಕುಗಳಿಗೆ ಹಾಗೂ ಇತರ ಸಂಸ್ಥೆಗಳಿಗೆ ಸೂಚಿಸುತ್ತದೆ. ಈ ಸೂಚನೆಗಳಿಗನುಸಾರವಾಗಿ ಅವು ತಮ್ಮ ಯೋಜನೆಗಳನ್ನು ಬದಲಿಸಿಕೊಳ್ಳಬೇಕಾಗುತ್ತದೆ. ಇದು ರಿಸರ್ವ್ ಬ್ಯಾಂಕು ಸ್ಥೂಲ ಉದರಿ ಯೋಜನೆ ರೂಪಿಸುವಾಗ ಅನುಸರಿಸುವ ಮಾರ್ಗ.

ಇನ್ನು ಬ್ಯಾಂಕುಗಳು ಸ್ಥೂಲ ಉದರಿ ಯೋಜನೆ ರೂಪಿಸುವಾಗ ಗಮನಿಸಬೇಕಾದದ್ದು ಈ ಮುಂದಿನ ಅಂಶಗಳನ್ನು:

1 ವಿವಿಧ ವಲಯಗಳ ಹಿಂದಿನ ಬೆಳವಣಿಗೆ ಹಾಗೂ ಅವುಗಳ ಈಚಿನ ಪ್ರವೃತ್ತಿಗಳು,
2 ಉದರಿ ವಿಭಾಗಗಳ ಬದಲಾಗುತ್ತಿರುವ ಸ್ವರೂಪದ ಅಧ್ಯಯನ,
3 ಯೋಜನೆಯಲ್ಲಿ ಹಾಗೂ ವಾಸ್ತವವಾಗಿ, ತಿಂಗಳು-ತಿಂಗಳಿನಲ್ಲಿ ನೀಡಬಹುದಾದ ಉದರಿಯ ಗರಿಷ್ಠ ಪ್ರಮಾಣವನ್ನು ನಿರ್ಧರಿಸುವುದು,

---

(ಹಿಂದಿನ ಪುಟದಿಂದ)

ಸಡಿಲವಾಗಬೇಕು ಎನ್ನುವವರ ವಾದವನ್ನೂ ಪರಿಶೀಲಿಸಬೇಕಾಗುತ್ತದೆ. ಒಂದು ವೇಳೆ ಅಂತಹ ಮುಕ್ತ ವ್ಯವಸ್ಥೆ ನೀಡಿದ್ದೇ ಆದರೆ ವಿರಳವಾದ ವಿದೇಶಿ ವಿನಿಮಯ ಅನುಭೋಗಿ ವಸ್ತುಗಳಿಗಾಗಿ ಪೋಲಾಗಿ, ಆಹಾರಧಾನ್ಯ, ಪೆಟ್ರೋಲಿಯಂ ಮುಂತಾದ ಅಗತ್ಯ ವಸ್ತುಗಳಿಗೆ ದೊರೆಯದೆ ಹೋಗಬಹುದು. ಇದಲ್ಲದೆ ದೇಶವನ್ನು ಪ್ರತಿಕೂಲ ಪಾವತಿ ಸಿಲ್ಕಿನ ಪರಿಸ್ಥಿತಿಯತ್ತ ದೂಡಬಹುದು. ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಋಣಭಾರ ಹೆಚ್ಚಬಹುದು. ಈ ಎಲ್ಲ ದೃಷ್ಟಿಗಳಿಂದ ನಿಯಂತ್ರಣದ ಕ್ರಮಗಳನ್ನು ಕುರಿತು ಚಿಂತಿಸಬೇಕಾಗುತ್ತದೆ. ಕಾಳಸಂತೆ ಪ್ರವೃತ್ತಿಯನ್ನು ಹತ್ತಿಕ್ಕಲು ನಿಯಂತ್ರಣ ಕ್ರಮಗಳಿವೆಯೇ ಹೊರತು, ನಿಯಂತ್ರಣದಿಂದ ಕಾಳಸಂತೆ ಸೃಷ್ಟಿಯಾಗುವುದಿಲ್ಲ. ವಿದೇಶಿ ವಿನಿಮಯದ ಕಾಳಸಂತೆಯ ಸೃಷ್ಟಿಗೆ ಬೇಡಿಕೆ ಪೂರೈಕೆಗಳ ಹಲವಾರು ಅಂಶಗಳು ಕೆಲಸಮಾಡುತ್ತವೆ. ಭಾರತದಂತಹ ಸಂಕೀರ್ಣ ಅರ್ಥವ್ಯವಸ್ಥೆಯಲ್ಲಿ ವಿದೇಶಿ ವಿನಿಮಯದ ಕಾಳಸಂತೆಯನ್ನು ನಿಯಂತ್ರಿಸುವುದು ಅತ್ಯಗತ್ಯವಾಗಿದೆ ಎಂಬುದನ್ನು ವಿಶೇಷವಾಗಿ ಹೇಳಬೇಕಾಗಿಯೇ ಇಲ್ಲ.

4 ದೊಡ್ಡ ಕೈಗಾರಿಕೆಗಳು, ಸಂಸ್ಥೆಗಳು ಬೇಡಿಕೆ ಸಲ್ಲಿಸುವ ಉದರಿಯ ಗಾತ್ರವನ್ನು ಗಮನದಲ್ಲಿಟ್ಟುಕೊಂಡು ವಾಸ್ತವವಾಗಿ ಅವರಿಗೆ ಬೇಕಾಗುವ ಅಥವಾ ತಾನು ಕೊಡಬಹುದಾದ ಉದರಿಯ ಪ್ರಮಾಣವನ್ನು ಅಂದಾಜು ಮಾಡುವುದು. ಈ ಹಿಂದೆ ಇಂತಹ ಸಂಸ್ಥೆಗಳಿಗೆ ಕೊಟ್ಟ ಉದರಿ ನಿರೀಕ್ಷಿತ ಉದ್ದೇಶಗಳಿಗಾಗಿ ಬಳಕೆಯಾಯಿತೆ ? ಅದರಿಂದ ಉತ್ಪಾದನೆಯಲ್ಲಿ ಹೆಚ್ಚಳವಾಯಿತೆ ? ಉದರಿಯ ದುರುಪಯೋಗವೇನಾದರೂ ಆಯಿತೆ ? ಎಂಬ ಅಂಶಗಳ ವ್ಯಾಪಕ ಅಧ್ಯಯನ.

5 ಆದ್ಯತಾವಲಯಗಳಿಗೆ ನೀಡಬೇಕಾದ ಉದರಿಯ ಪ್ರಮಾಣವನ್ನು ನಿರ್ಧರಿಸುವುದು, ರಫ್ತು ಉದರಿಯ ಪ್ರಮಾಣವನ್ನು ನಿರ್ಧರಿಸುವುದು.

6 ಉದರಿ ನೀಡಿಕೆಯ ವೆಚ್ಚ-ಲಾಭಗಳ ಅಧ್ಯಯನ ನಡೆಸಿ, ಲಾಭದಾಯಕವಾಗಿ ಯಾವ ವಲಯಕ್ಕೆ ಎಷ್ಟು ಉದರಿ ನೀಡಬೇಕೆಂದು ನಿರ್ಧರಿಸುವುದು. ಅಲ್ಲದೆ, ವ್ಯಾಪಾರ ಹಾಗೂ ಕೈಗಾರಿಕಾ ವಲಯಗಳಿಗೆ ನೀಡುತ್ತಿದ್ದ ಉದರಿಯಲ್ಲಿ ಎಷ್ಟನ್ನು ಆದ್ಯತಾ ವಲಯಗಳಿಗೆ ತಿರುಗಿಸಬಹುದೆಂಬುದನ್ನು ಅಂದಾಜು ಮಾಡುವುದು.

7 ಲಾಭಪ್ರದತೆ ಹಾಗೂ ದ್ರವ್ಯತೆ ಸಮಸ್ಯೆಗಳನ್ನು ಗಮನದಲ್ಲಿರಿಸಿಕೊಂಡು ಸೂಕ್ತವಾದ ವಾರ್ಷಿಕ "ಉದರಿ-ಠೇವಣಿ" ಅನುಪಾತವನ್ನು ಕಂಡುಹಿಡಿಯುವುದು.

8 ರಾಷ್ಟ್ರೀಯ ಯೋಜನೆ ಹಾಗೂ ನೀತಿಗಳಿಗನುಸಾರವಾಗಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಉದರಿ ಆದ್ಯತೆಯನ್ನು ಗಮನಿಸುವುದು.

9 ತಮ್ಮ ಸಂಪನ್ಮೂಲಗಳ ನಿಖರವಾದ ಅಂದಾಜು ಹಾಗೂ ಅವುಗಳನ್ನು ಹೆಚ್ಚಿಸಲು ಕೈಗೊಳ್ಳಬೇಕಾದ ಕಾರ್ಯಕ್ರಮಗಳನ್ನು ರೂಪಿಸುವುದು.

10 ತನ್ನ ಸಾಂಸ್ಥಿಕ ಆಯೋಜನೆಯಲ್ಲಿಯೇ ಉದರಿ ಆಯೋಜನೆಯನ್ನು ವ್ಯವಸ್ಥಿತವಾಗಿ ಅಳವಡಿಸುವುದು.

11 ವಾಸ್ತವದ ಹಿನ್ನೆಲೆಯಲ್ಲಿ ಯೋಜನೆಯ ಹಾಗೂ ಅದರ ಮರು ಹೊಂದಾಣಿಕೆಗಳ ಪರಿಣಾಮವನ್ನು ಅರಿಯಲು ಯೋಜನೆಯನ್ನು ಕಾರ್ಯರೂಪಕ್ಕೆ ತರುವಲ್ಲಿ ಆದ ವೆಚ್ಚ, ಸಂಸ್ಥೆ ಎದುರಿಸಿದ ತೊಂದರೆಗಳು ಮುಂತಾದುವನ್ನು ಅರಿಯಲು ಸೂಕ್ತವಾದ ಪರ್ಯಾವರ್ತನೆಯೊಂದನ್ನು ರೂಪಿಸಿಕೊಳ್ಳುವುದು.

ಹೀಗೆ ಈ ಎಲ್ಲ ಅಂಶಗಳನ್ನು ಗಮನಿಸಿ ಸ್ಥೂಲ ಉದರಿ ಯೋಜನೆಯನ್ನು ಬ್ಯಾಂಕುಗಳು ಸಿದ್ಧಪಡಿಸಬೇಕು. ಬ್ಯಾಂಕುಗಳೂ ಇತರ ಸಂಸ್ಥೆಗಳೂ ಈ ರೀತಿ ಸಿದ್ಧಪಡಿಸಿದ ಯೋಜನೆ ರಿಸರ್ವ್ ಬ್ಯಾಂಕಿನ ಉದರಿ ಆಯೋಜನಾ ವಿಭಾಗದಲ್ಲಿ ಪರಿಶೀಲಿಸಲ್ಪಟ್ಟು ಸೂಕ್ತ ಮಾರ್ಪಾಡನ್ನು ಹೊಂದುತ್ತದೆ. ಒಟ್ಟಾರೆ ಒಂದು ರಾಷ್ಟ್ರೀಯ ಉದರಿ ಯೋಜನೆ ಸಿದ್ಧವಾಗುತ್ತದೆ.

## ಸೂಕ್ಷ್ಮ ಉದರಿ ಆಯೋಜನೆ

ಸ್ಥೂಲ ಉದರಿ ಆಯೋಜನೆಯ ವ್ಯಾಪ್ತಿಗೆ ಹೊರತಾದ ಕ್ಷೇತ್ರಗಳ ಉದರಿ ಅಗತ್ಯಗಳು, ಹಿಂದುಳಿದ ಪ್ರದೇಶಗಳ ಅಭಿವೃದ್ಧಿ ಹಾಗೂ ಗ್ರಾಮೀಣ ಜನರ ಅಗತ್ಯಗಳನ್ನು ಗಮನಿಸಲು ಸೂಕ್ಷ್ಮ ಉದರಿ ಯೋಜನೆ ಸಿದ್ಧವಾಗಬೇಕಾಗುತ್ತದೆ. ವಿಕೇಂದ್ರೀಕರಣದ ತತ್ವದ ಆಧಾರದ ಮೇಲೆ ಸೂಕ್ಷ್ಮ ಉದರಿ ಯೋಜನೆ ರೂಪಿತವಾಗುತ್ತದೆ. ಇದು ಸಹ ಎರಡು ನೆಲೆಗಳಲ್ಲಿ ಆಗಬೇಕಾಗುತ್ತದೆ. ಒಂದು ಸಾಂಸ್ಥಿಕವಾಗಿ, ಇನ್ನೊಂದು ರಾಷ್ಟ್ರೀಯವಾಗಿ.

ಸಾಂಸ್ಥಿಕ ವಿಕೇಂದ್ರೀಕರಣ–ಮುಖ್ಯವಾಗಿ ಬ್ಯಾಂಕುಗಳಲ್ಲಿ–ಅದರ ಸಂರಚನೆಯನ್ನು ಹೊಂದಿಕೊಂಡಂತೆ, ವೃತ್ತ ಪ್ರಧಾನ ಕಛೇರಿಗಳು, ವಲಯ ಕಛೇರಿಗಳು, ವಿಭಾಗೀಯ ಕಛೇರಿಗಳು, ಪ್ರಾದೇಶಿಕ ಕಛೇರಿಗಳು ಹಾಗೂ ಕೊನೆಗೆ ಶಾಖೆಗಳು ಹೀಗೆ ಸಾಗುತ್ತದೆ. ಇದೇ ಕ್ರಮದಲ್ಲಿ ಶಾಖೆಯಿಂದ ಇಡೀ ಸಂಸ್ಥೆಯ ವರೆಗೆ ಉದರಿ ಆಯೋಜನೆ ಕ್ರೋಢೀಕೃತಗೊಳ್ಳುತ್ತ ಹೋಗುತ್ತದೆ.

ಶಾಖೆಯೊಂದರ ಸಿಬ್ಬಂದಿ, ಹಿಂದಿನ ವರ್ಷಗಳಲ್ಲಿ ಅದು ವಿವಿಧ ಕ್ಷೇತ್ರಗಳಲ್ಲಿ ನೀಡಿರುವ ಉದರಿ, ಶಾಖೆ ಇರುವ ಪ್ರದೇಶದಲ್ಲಾಗಿರುವ, ಆಗುತ್ತಿರುವ ಕೈಗಾರಿಕಾ ಪ್ರಗತಿ ಮುಂತಾದ ಬದಲಾವಣೆಗಳು, ಈಗಾಗಲೇ ನೀಡಿರುವ ಉದರಿಯ ಬಳಕೆ ಮುಂತಾದ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ, ಶಾಖೆ ಇರುವ ಜಿಲ್ಲೆ ಹಾಗೂ ರಾಜ್ಯ ಸರ್ಕಾರದ ಆದ್ಯತೆಗನುಗುಣವಾಗಿ ಶಾಖೆ ಆ ವರ್ಷದಲ್ಲಿ ನೀಡಬಹುದಾದ ಉದರಿಯ ಗಾತ್ರವನ್ನು ನಿರ್ಧರಿಸಬೇಕು. ಇದು ಜಿಲ್ಲಾ ಉದರಿ ಆಯೋಜನೆಯಂತೆ ಒಟ್ಟು ಆ ಜಿಲ್ಲೆಯಲ್ಲಿನ ಎಲ್ಲ ಶಾಖೆಗಳಿಗೆ ನಿಗದಿತವಾದ ಉದರಿಯ ಗಾತ್ರಕ್ಕೂ ಹೊಂದಿಕೊಂಡಂತಿರಬೇಕು. ಹೀಗೆ ಶಾಖೆಯೊಂದರ ಉದರಿ ಯೋಜನೆ ಸಿದ್ಧವಾದರೆ ಸಂಸ್ಥೆ ಎಲ್ಲ ಶಾಖೆಗಳಿಂದ ಅದನ್ನು ಪಡೆದುಕೊಂಡು ತನ್ನ ಸ್ಥೂಲ ಯೋಜನೆಗೆ ಇವೆಲ್ಲದರ ಒಟ್ಟು ಉದರಿ ಸರಿಹೊಂದುವಂತೆ ಅಗತ್ಯ ಮಾರ್ಪಾಡುಗಳನ್ನು ಸೂಚಿಸಿ ಒಟ್ಟಾರೆ ತನ್ನ ಯೋಜನೆಯನ್ನು ರೂಪಿಸಿಕೊಳ್ಳುತ್ತದೆ.

## ಜಿಲ್ಲಾ ಉದರಿ ಯೋಜನೆ

ಜಿಲ್ಲೆಗಳಾಗಿ ರಾಜ್ಯಗಳನ್ನು ವಿಂಗಡಿಸಿರುವುದರಿಂದ ಪ್ರತಿ ಜಿಲ್ಲೆಯ ಉದರಿ ಅಗತ್ಯಗಳು, ಅಲ್ಲಿನ ಸ್ಥಿತಿಗತಿಗಳು ಮುಂತಾದವನ್ನು ಅಭ್ಯಸಿಸಿ ನಂತರ ಅವನ್ನು ಕ್ರೋಢೀಕರಿಸಿದರೆ ಹೆಚ್ಚು ನಿಖರವಾದ ಚಿತ್ರ ದೊರೆಯುತ್ತದೆ ಎಂಬ ಹಿನ್ನೆಲೆಯಲ್ಲಿ ಜಿಲ್ಲಾ ಉದರಿ ಆಯೋಜನೆ ರೂಪತಾಳಿತು.

1970ರಲ್ಲಿ ಮೊತ್ತಮೊದಲಿಗೆ ಜಿಲ್ಲಾ ಉದರಿ ಆಯೋಜನೆ ಅಸ್ತಿತ್ವಕ್ಕೆ ಬಂದಿತು. ಇದನ್ನು ರೂಪಿಸುವ ಹೊಣೆ ಅಗ್ರ ಬ್ಯಾಂಕುಗಳಿಗೇ ಬಿದ್ದಿತು. ಜಿಲ್ಲಾ ಉದರಿ ಯೋಜನೆಯನ್ನು ರೂಪಿಸುವಲ್ಲಿ ಈ ಮುಂದಿನ ಅಂಶಗಳನ್ನು ಮುಖ್ಯವಾಗಿ ಗಮನಿಸಬೇಕಾಗುತ್ತದೆ:

ಜಿಲ್ಲೆಯ ಮುಖ್ಯ ಆರ್ಥಿಕ ಚಟುವಟಿಕೆಗಳು, ಪ್ರಾಕೃತಿಕ ಸಂಪನ್ಮೂಲಗಳು, ಅಭಿವೃದ್ಧಿಯ ಭವ ಸಾಮರ್ಥ್ಯ, ಅದನ್ನನುಸರಿಸಿ ಹಿಗ್ಗುವ ಉದರಿ ಅಗತ್ಯಗಳು.

ಜಿಲ್ಲೆಯಲ್ಲಿ ಈಗಾಗಲೇ ಇರುವ ವಾಣಿಜ್ಯ ಹಾಗೂ ಸಹಕಾರಿ ಬ್ಯಾಂಕುಗಳು, ಅವು ನೀಡಿರುವ ಉದರಿಯ ಪ್ರಮಾಣ, ಜನಸಂಖ್ಯಾ ವೃದ್ಧಿಯಿಂದ ಆರ್ಥಿಕತೆಯ ಮೇಲೆ ಉಂಟಾಗುವ ಪರಿಣಾಮ, ಜಿಲ್ಲೆಯ ಜನರ ಸ್ವಭಾವ, ಪ್ರವೃತ್ತಿ ಮುಂತಾದವನ್ನು ಅಭ್ಯಸಿಸುವುದು.

ಜಿಲ್ಲೆಯಲ್ಲಿ ಇರುವ ಪರಂಪರಾಗತ ಗೃಹ ಹಾಗೂ ಗುಡಿ

ಕೈಗಾರಿಕೆಗಳು, ಅವುಗಳನ್ನು ಉತ್ತಮಪಡಿಸುವ ರೀತಿ ವಿಧಾನಗಳು, ಲಭ್ಯವಿರುವ ಅಧೋರಚನೆ.

ಜಿಲ್ಲೆಯ ಒಟ್ಟು ಉದರಿ ಬೇಡಿಕೆ-ಪೂರೈಕೆಗಳನ್ನು ನಿಖರವಾಗಿ ತಿಳಿದು ಉದರಿ ಕೊರತೆಯ ಪ್ರಮಾಣವನ್ನು ನಿರ್ಧರಿಸುವುದು.

ಜಿಲ್ಲೆಯಲ್ಲಿ ನೀಡಿದ ಉದರಿಯ ಸಮರ್ಪಕ ಬಳಕೆ ಕುರಿತು ಮಾಹಿತಿ ಪಡೆಯುವ ಸಾಧ್ಯತೆಗಳು, ಮರುಪಾವತಿ ಹೆಚ್ಚಿನ ತೊಂದರೆ ಇಲ್ಲದೆ ಆಗುತ್ತಿದೆಯೇ ಎಂಬ ಬಗೆಗೆ ಗಮನ ಹರಿಸುವುದು.

ಜಿಲ್ಲೆಯ ಜನರು ಉದ್ಯಮಶೀಲರಾಗಿದ್ದಾರೆಯೆ, ಹೊಸ ಉದ್ಯಮಗಳನ್ನು ನಡೆಸುವಷ್ಟು ಪ್ರತಿಭೆಯನ್ನು ಅವರು ಹೊಂದಿದ್ದಾರೆಯೆ ಎಂಬ ಅಂಶದ ಬಗೆಗೆ ಅಧ್ಯಯನ ನಡೆಸುವುದು.

ಇವು ಜಿಲ್ಲಾ ಉದರಿ ಯೋಜನೆಯನ್ನು ರೂಪಿಸುವಲ್ಲಿ ಮಹತ್ವದ ಅಂಶಗಳು. ಇವುಗಳ ಆಧಾರದ ಮೇಲೆಯೇ ಯೋಜನೆಯನ್ನು ರೂಪಿಸಲು ಸಾಧ್ಯ.

ಜಿಲ್ಲೆಯಲ್ಲಿನ ಅಸಮಾನತೆಯನ್ನು ತೊಡೆದುಹಾಕಲೋಸುಗವೇ ಉದರಿಯನ್ನು ಎಲ್ಲ ಕಡೆ ನೀಡಬೇಕೆಂಬ ತೀರ್ಮಾನಕ್ಕೆ ಬರುವುದು ಅಷ್ಟು ಸರಿಯಲ್ಲ. ಇದು ಜಿಲ್ಲೆಯ ಅಭಿವೃದ್ಧಿಯ ದೃಷ್ಟಿಯಿಂದ ಪ್ರತಿಕೂಲಕರವಾಗಬಹುದು. ಇದಕ್ಕೆ ಬದಲು ಕೆಲ ಆಯ್ದ ಪ್ರದೇಶಗಳ ಸರ್ವಾಂಗೀಣ ಅಭಿವೃದ್ಧಿಯನ್ನು ಗಮನದಲ್ಲಿಟ್ಟುಕೊಳ್ಳುವುದು ಒಳ್ಳೆಯದು. ಹೊಸ ಆರ್ಥಿಕ ಚಟುವಟಿಕೆಗಳನ್ನು ಪ್ರಾರಂಭಿಸುವುದು, ಹೊಸ ಉದ್ಯಮಿಗಳಿಗೆ ಪ್ರೋತ್ಸಾಹ ನೀಡುವುದು, ಕೃಷಿ ಆಧಾರಿತ ಕೈಗಾರಿಕೆಗಳನ್ನು ಸ್ಥಾಪಿಸುವುದು ಮುಂತಾದವುಗಳ ಸಾಧ್ಯತೆಯನ್ನು ಪರಿಶೀಲಿಸಬೇಕಾಗುತ್ತದೆ.

ಜಿಲ್ಲೆಯಲ್ಲಿ ಈ ಮುಂಚಿನ ಉದರಿ ಯೋಜನೆಯನ್ನು ಕಾರ್ಯಗತಗೊಳಿಸುವಲ್ಲಿ ಆದ ತೊಂದರೆಗಳು, ಇದ್ದ ಇತಿಮಿತಿಗಳು, ಜಿಲ್ಲೆಯಲ್ಲಿ ಇರುವ ಹಣಕಾಸು ಸಂಸ್ಥೆಗಳು, ಅವು ನೀಡಿರುವ ಉದರಿ ಪ್ರಮಾಣ, ಇರುವ ಮಾರುಕಟ್ಟೆ ಕೇಂದ್ರಗಳು, ರಸ್ತೆ ಸಾರಿಗೆ ಸೌಲಭ್ಯಗಳು, ಕೃಷಿ ಉತ್ಪನ್ನಗಳ ದಾಸ್ತಾನು ಸೌಲಭ್ಯಗಳು, ಜಿಲ್ಲೆಯ ಮಣ್ಣಿನ ಗುಣ ಮುಂತಾದವನ್ನು ಅಭ್ಯಸಿಸಿ ವಿವರವಾಗಿ ಸರ್ವೇಕ್ಷಣ ನಡೆಸಬೇಕಾಗುತ್ತದೆ.

ಇಷ್ಟೆಲ್ಲ ವಿವರಗಳ ಸರ್ವೇಕ್ಷಣ, ಅಧ್ಯಯನ ನಡೆಸಿದ ನಂತರವೇ ಉತ್ತಮ ಉದರಿ ಯೋಜನೆಯೊಂದನ್ನು ರೂಪಿಸಲು ಸಾಧ್ಯ.

### ಸರ್ಕಾರದೊಂದಿಗೆ ಸಂಬಂಧ

ಉದರಿ ಆಯೋಜನೆ ಯಶಸ್ವಿಯಾಗಬೇಕಾದರೆ ಆಯೋಜಕರು, ಅದನ್ನು ಅನುಷ್ಠಾನಕ್ಕೆ ತರುವ ಬ್ಯಾಂಕುಗಳು ಅಥವಾ ಇತರ ಹಣಕಾಸು ಸಂಸ್ಥೆಗಳು ಮತ್ತು ಸರ್ಕಾರ ಇವುಗಳ ನಡುವೆ ಅತ್ಯುತ್ತಮ ಸಂಬಂಧ ಸಮನ್ವಯಗಳು ಇರಬೇಕಾಗುತ್ತದೆ. ಅವುಗಳ ಕಾರ್ಯಕ್ರಮಗಳು ಪರಸ್ಪರ ಪೂರಕವಾಗಿರಬೇಕು.

### ಇತಿಮಿತಿಗಳು, ಸಮಸ್ಯೆಗಳು

ಸ್ಥೂಲ, ಸೂಕ್ಷ್ಮ ಉದರಿ ಯೋಜನೆಗಳು ಸುಲಭವಾಗಿ ರೂಪಿಸಿ ಕಾರ್ಯಗತಗೊಳಿಸುವಂತೆ ಸರಳವಲ್ಲ. ಈ ಕಾರ್ಯ ಅತ್ಯಂತ ಜಟಿಲವೂ ಅಪಾರ ಮಾನವಶಕ್ತಿಯನ್ನು ಬೇಡುವಂತಹದೂ ನಾನಾ ಬಗೆಯ ಸಂಸ್ಥೆಗಳು ಒಟ್ಟುಗೂಡಿ ಒಂದೇ ನಿಟ್ಟಿನಲ್ಲಿ ಕಾರ್ಯವೆಸಗಿದರೆ ಯಶಸ್ವಿಯಾಗುವಂತಹದೂ ಆಗಿದೆ. ಇವುಗಳನ್ನು ರೂಪಿಸುವಲ್ಲಿ ಎದುರಾಗುವ ಸಮಸ್ಯೆಗಳು, ಅನುಭವಕ್ಕೆ ಬರುವ ಇತಿಮಿತಿಗಳು ಅನೇಕ. ಇಂತಹವುಗಳ ಕಡೆಗೂ ಗಮನ ಹರಿಸಿದರೆ ಒಳ್ಳೆಯದು.

ಸಾಮಾಜಿಕ ಹಾಗೂ ಆರ್ಥಿಕ ಪರಿಸ್ಥಿತಿಗಳ ಬದಲಾವಣೆಗಳು ಉದರಿ ಯೋಜನೆಯ ಲೆಕ್ಕಾಚಾರವನ್ನು ತೀವ್ರವಾಗಿ ಹೆಚ್ಚು ಕಡಿಮೆ ಮಾಡಬಹುದು. ಉದಾಹರಣೆಗೆ ತೀವ್ರ ಅನಾವೃಷ್ಟಿಯಿಂದ ಉಂಟಾದ ಕ್ಷಾಮ, ನೆರೆಯ ಹಾವಳಿಯಿಂದ ಸಂಭವಿಸುವ ಬೆಳೆ ಹಾಗೂ ಇತರ ಆಸ್ತಿಗಳ ನಷ್ಟ ಮುಂತಾದವು. ಇಂತಹ ಸಂಗತಿಗಳ ಮುಂಗಾಣ್ಕೆ ಬ್ಯಾಂಕುಗಳಿಗಳವಲ್ಲ. ವಿಜ್ಞಾನದಲ್ಲಿ ಆಗಿರುವ ಅಗಾಧ ಬೆಳವಣಿಗೆಯಿಂದಾಗಿ ಕೊಂಚಮಟ್ಟಿಗೆ ಇವನ್ನು ಅಂದಾಜುಮಾಡಬಹುದಾದರೂ ಅದಕ್ಕೆ ಪರಿಣತ ಮಾನವ ಶಕ್ತಿಯಾಗಲಿ, ಹಣ ಸಂಪನ್ಮೂಲಗಳಾಗಲಿ ಬ್ಯಾಂಕಿನ ಬಳಿ ಇರುವುದಿಲ್ಲ. ಸರ್ಕಾರದ ನೀತಿಗಳಲ್ಲಿ ದಿಢೀರ್ ಬದಲಾವಣೆಯಾದಲ್ಲಿ ವ್ಯಾಪಾರ, ಆಮದು, ರಫ್ತುಗಳ ದಿಕ್ಕುಗಳು ಬದಲಾಗಿ ಉದರಿ ಆಯೋಜನೆ ಆ ದಿಕ್ಕಿನಲ್ಲಿ ನಿಷ್ಪ್ರಯೋಜಕ ಅಥವ ಕನಿಷ್ಠ ಪರಿಣಾಮಕಾರಿಯಾಗುತ್ತದೆ. ಸರ್ಕಾರದ ಆಡಳಿತ ಯಂತ್ರದ ನಿಧಾನಗತಿಯೂ ಉದರಿ ಆಯೋಜನೆಯ ಮೇಲೆ ಪರಿಣಾಮ ಬೀರುತ್ತದೆ. ಉದಾಹರಣೆಗೆ ಒಮ್ಮೆ ಬ್ಯಾಂಕುಗಳು ಹಾಗೂ ಹೈದರಾಬಾದ್ ಸರ್ಕಾರದ ನಡುವೆ ಬಾವಿ ತೋಡುವ ಬಗೆಗೆ ಒಂದು ಕಾರ್ಯಕ್ರಮ ತೀರ್ಮಾನವಾಯಿತು. ಸರ್ಕಾರದಿಂದ ಕೆಲವು ಜಿಲ್ಲೆಗಳಿಗೆ ಈ ಬಗ್ಗೆ ಆದೇಶ ತಲುಪಲು ಒಂದು ವರ್ಷ ಹಿಡಿಯಿತಂತೆ. ಹೀಗಾದರೆ ಉದರಿ ಆಯೋಜನೆ ಯಶಸ್ವಿಯಾಗುವುದು ಹೇಗೆ ? ಸರ್ಕಾರಿ ಅಧಿಕಾರಿಗಳಿಗೆ ಬ್ಯಾಂಕಿನ ಉದರಿ ನೀಡಿಕೆ ಕಾರ್ಯಕ್ರಮದಲ್ಲಿ ಕೊಂಚ ಆಸಕ್ತಿ ಇರುವುದೇನೋ ನಿಜ. ಆದರೆ ಈ ಆಸಕ್ತಿ ಉದರಿ ನೀಡಿಕೆಯೊಂದಿಗೇ ಮಾಯವಾಗಿ ಹೋಗುತ್ತಿದೆ. ಉದರಿಯ ಅಂತಿಮ ಬಳಕೆಯ ಬಗ್ಗೆಯಾಗಲಿ, ಅದರ ಮರುಪಾವತಿ ಬಗ್ಗೆಯಾಗಲಿ ಆವರು ಕಿಂಚಿದಾಸಕ್ತಿಯನ್ನೂ ತೋರದೆ, ಅವು ಬ್ಯಾಂಕಿನ ಕೆಲಸ ಎಂದುಬಿಡುತ್ತಾರೆ. ಸರ್ಕಾರದ ಯೋಜನೆಗಳ ಅನುಷ್ಠಾನದ ನಿಧಾನಗತಿ ಸಹ ಉದರಿ ಆಯೋಜನೆಯ ಯಶಸ್ಸಿಗೆ ಅಡ್ಡಿಯಾಗುತ್ತದೆ. ಉದಾಹರಣೆಗೆ ಒಂದು ರಾಜ್ಯ ಸರ್ಕಾರ ಒಂದು ವರ್ಷದಲ್ಲಿ ಅನೇಕ ಲಕ್ಷ ಹೆಕ್ಟೇರು ಭೂಮಿಯನ್ನು ನೀರಾವರಿ ಭೂಮಿಯಾಗಿ ಪರಿವರ್ತಿಸುವುದೆಂದು ಘೋಷಿಸಿತು. ಆದರೆ ವಾಸ್ತವವಾಗಿ ನೀರಾವರಿ ಸೌಲಭ್ಯ ದೊರಕಿದ್ದು ಅದರ ಶೇಕಡಾ ಹತ್ತರಷ್ಟು ಭೂಮಿಗೆ ಮಾತ್ರ. ಬ್ಯಾಂಕುಗಳು ಅನೇಕ ಲಕ್ಷ ಎಕರೆ ಭೂಮಿಯ ಕೃಷಿಗೆ ಉದರಿ ಒದಗಿಸಲು ಆಯೋಜಿಸಿದ್ದು ವ್ಯರ್ಥವಾಯಿತು. ಒಮ್ಮೊಮ್ಮೆ ಸ್ವತಃ ರಿಸರ್ವ್ ಬ್ಯಾಂಕು ಇದ್ದಕ್ಕಿದ್ದಂತೆ ದ್ರವತ್ವ ಅನುಪಾತದಲ್ಲಿ ಬದಲಾವಣೆ ಮಾಡುವುದೂ ಸಹ ಉದರಿ ಆಯೋಜನೆ ಪರಿಪೂರ್ಣವಾಗಲು ತಡೆಯಾಗುತ್ತದೆ.

### ಅಧೋರಚನೆ

ನಮ್ಮ ದೇಶದ ಅನೇಕ ಸ್ಥಳಗಳಲ್ಲಿ ಪ್ರಾಥಮಿಕ ಅಧೋರಚನೆಗಳಾದ ಸಾರಿಗೆ ವ್ಯವಸ್ಥೆ, ಮಾರುಕಟ್ಟೆಗಳು ಇರುವುದಿಲ್ಲ. ಬ್ಯಾಂಕುಗಳು ಸಾರಿಗೆ ಸೌಲಭ್ಯಕ್ಕೆ ಉದರಿ ಒದಗಿಸಬಹುದೇ ವಿನಾ ರಸ್ತೆ ನಿರ್ಮಾಣಕ್ಕಲ್ಲ. ಸರ್ಕಾರ ಯಾವ ವೇಗದಲ್ಲಿ ಅಧೋರಚನೆಯನ್ನು ನಿರ್ಮಿಸುತ್ತದೋ ಅದೇ ವೇಗದಲ್ಲಿ ಮಾತ್ರ ಬ್ಯಾಂಕುಗಳು ಆಯಾ ಪ್ರದೇಶದ ಅಭಿವೃದ್ಧಿಗಾಗಿ ಉದರಿ ಆಯೋಜನೆಯನ್ನು ರೂಪಿಸಲು ಶಕ್ತವಾಗುತ್ತದೆ.

### ಸಾಮಾಜಿಕ ಕಾರಣಗಳು

ಎಷ್ಟೋ ಬಾರಿ ಕೆಲ ಕ್ಷೇತ್ರಗಳ ಜನ ಪರಂಪರಾಗತವಾಗಿ ಹಿಡಿದಿರುವ ವೃತ್ತಿಗಳನ್ನು ಬಿಡಲು ಒಪ್ಪುವುದಿಲ್ಲ. ಬ್ಯಾಂಕುಗಳು ತೋರುವ ಯಾವ ಆಮಿಷಕ್ಕೂ ಅವರು ಪಕ್ಕಾಗುವುದಿಲ್ಲ. ಇಂತಹ ಕಡೆ ಅಭಿವೃದ್ಧಿ ಸಾಧಿಸುವ ಹಾಗೆ ಉದರಿ ಯೋಜನೆ ರೂಪಿಸಲು ಸಾಧ್ಯವಾಗುವುದಿಲ್ಲ. ಸೂಕ್ತ ಶಿಕ್ಷಣ ಆ ಜನಕ್ಕೆಲ್ಲ ದೊರಕಿದ ನಂತರವೇ ಅದು ಸಾಧ್ಯವಾಗುತ್ತದೆ. ಅಲ್ಲದೆ ಎಲ್ಲ ಪ್ರದೇಶಗಳಲ್ಲಿಯೂ ಎಲ್ಲರಿಗೂ ಜೀವನಸಾಮರ್ಥ್ಯ (Viability) ಉಳ್ಳ ಯೋಜನೆಗಳನ್ನು ರೂಪಿಸುವುದೂ ಅಸಾಧ್ಯವೆನಿಸುತ್ತದೆ. ಇಂತಹ ಅನೇಕ ಕಡೆಗಳಲ್ಲಿ ಉದರಿ ಕೊರತೆಗಿಂತ ಜೀವನಸಾಮರ್ಥ್ಯದ ಕೊರತೆಯೇ (Viability gap) ಪ್ರಮುಖವಾಗಿರುತ್ತದೆ.

### ಸಹಕಾರಿ ರಂಗ

ಬ್ಯಾಂಕುಗಳು ಪ್ರವೇಶಿಸುವುದಕ್ಕೆ ಮುಂಚೆಯೇ ಗ್ರಾಮೀಣ ಪ್ರದೇಶಗಳಲ್ಲಿ ಬೇರೂರಿದ ಸಹಕಾರಿ ರಂಗ ಅನೇಕ ಕಡೆ ತಮ್ಮ ಕ್ಷೇತ್ರದಲ್ಲಿ ಬ್ಯಾಂಕುಗಳು ಪ್ರವೇಶಿಸುವುದನ್ನು ಸಹಿಸುವುದಿಲ್ಲ. ಉದಾಹರಣೆಗೆ ಮಹಾರಾಷ್ಟ್ರದಲ್ಲಿ ಉತ್ತಮವಾಗಿ ಕಾರ್ಯ ನಿರ್ವಹಿಸುತ್ತಿರುವ ಕೆಲವು ಸಹಕಾರಿ ಬ್ಯಾಂಕುಗಳು, ವಾಣಿಜ್ಯ ಬ್ಯಾಂಕುಗಳು ಸಹ ತಮ್ಮ ಕ್ಷೇತ್ರದಲ್ಲಿ ಉದರಿ ನೀಡಲು ಪ್ರಾರಂಭಿಸುತ್ತವೆಂದು ತಿಳಿದಾಗ ಹೇಗಿದ್ದರೂ ಈ ಕ್ಷೇತ್ರದಲ್ಲಿ ಉದರಿಯನ್ನು ನಾವು ನೀಡುತ್ತಿದ್ದೇವೆ, ವಾಣಿಜ್ಯ ಬ್ಯಾಂಕುಗಳ ಬಳಿ ಹೆಚ್ಚಿನ ಹಣವಿದ್ದರೆ ಅದನ್ನು ನಮ್ಮಲ್ಲಿ ಠೇವಣಿಯಾಗಿಡಲಿ ಎಂದು ಪ್ರತಿಕ್ರಿಯಿಸಿದುವಂತೆ. ಹಾಗೆಂದು ಸಹಕಾರಿ ರಂಗವನ್ನು ಉಪೇಕ್ಷಿಸುವುದೂ ಸಲ್ಲದು. ಸ್ವತಂತ್ರವಾಗಿ ಎರಡೂ ರಂಗಗಳ ಬ್ಯಾಂಕುಗಳು ಒಂದೇ ವರ್ಗಕ್ಕೆ ಉದರಿ ನೀಡಲು ಪ್ರಾರಂಭಿಸಿದರೆ ಉದರಿಯ ನೀಡಿಕೆ ವ್ಯರ್ಥವಾಗುತ್ತದೆ. ಅಂತಹ ಉದರಿ ಆಯೋಜನೆ ಗುರಿ ತಲಪುವುದಿಲ್ಲ, ವಿಫಲವಾಗುತ್ತದೆ.

### ಉದರಿಯ ಅಂತಿಮ ಬಳಕೆ

ಉದರಿಯ ಹಣ ಕೊಟ್ಟ ಉದ್ದೇಶಕ್ಕೆ ಮಾತ್ರ ಉಪಯೋಗವಾಗಬೇಕು. ಹಾಗಾಗದೆ ಬೇರೆ ಬಾಬುಗಳಿಗೆ ಅದು ವೆಚ್ಚವಾದರೆ, ಉದರಿಯ ಆಯೋಜನೆಯ ಉದ್ದೇಶ ಎಷ್ಟೂ ಈಡೇರುವುದಿಲ್ಲ. ಎಂತಲೇ ಇದನ್ನು ಬ್ಯಾಂಕುಗಳು, ಹಣ ನೀಡಿದ ಇತರ ಸಂಸ್ಥೆಗಳು ಯಾವಾಗಲೂ ಜಾಗೃತರಾಗಿ ಗಮನಿಸುತ್ತಲೇ ಇರಬೇಕಾಗುತ್ತದೆ. ರಿಸರ್ವ್ ಬ್ಯಾಂಕು ಇದನ್ನು ಮನಗಂಡೇ ಒಂದು ಕೋಟಿ ರೂ. ಮತ್ತು ಮೇಲ್ಪಟ್ಟ ಉದರಿಯನ್ನು ಯಾವುದೇ ಬ್ಯಾಂಕು ನೀಡಬೇಕಾದಲ್ಲಿ ರಿಸರ್ವ್ ಬ್ಯಾಂಕಿಗೆ ಆ ಬಗೆಗಿನ ಎಲ್ಲ ವಿವರಗಳನ್ನೂ ಸಲ್ಲಿಸಿ, ಅದರ ಅನುಮೋದನೆ ಪಡೆಯಬೇಕು ಎಂದು ವಿಧಿಸಿದೆ. ಉದರಿ ನೀಡಿದ ಅನುತರವೂ ರಿಸರ್ವ್ ಬ್ಯಾಂಕು ಖಾತೆಯ ಬಗೆಗಿನ ವಿವರಗಳನ್ನು ಕಾಲಕಾಲಕ್ಕೆ ತರಿಸಿಕೊಳ್ಳುತ್ತಿರುತ್ತದೆ. ಇದನ್ನು ರಿಸರ್ವ್ ಬ್ಯಾಂಕು 'ಉದರಿ ಪ್ರಾಧಿಕರಣ ಯೋಜನೆ' (Credit Authorisation Scheme) ಎಂದು ಹೆಸರಿಸಿದೆ. ಇದು ಕೂಡ ಕಾಲಕಾಲಕ್ಕೆ ವಿಮರ್ಶಿತವಾಗುತ್ತಿರುತ್ತದೆ. ಇತ್ತೀಚೆಗೆ ಇದನ್ನು ಉತ್ತಮಪಡಿಸುವ ಸಲುವಾಗಿ ನೇಮಕಗೊಂಡಿದ್ದ ಮರಾಠೆ ಸಮಿತಿ ಇದನ್ನು ಉದರಿ ಪರಿವೀಕ್ಷಣ ಯೋಜನೆ ಎಂದು ಬದಲಾಯಿಸಬೇಕೆಂದೂ, ಇದರ ಮುಖ್ಯ ಉದ್ದೇಶ ಉದರಿಯ ಬಳಕೆ ಸರಿಯಾದ ರೀತಿಯಲ್ಲಿ ಆಗುತ್ತಿದೆಯೇ ಎಂಬುದನ್ನು ಖಾತರಿಪಡಿಸಿಕೊಳ್ಳುವುದೇ ಆಗಿದೆ ಎಂದೂ ಅಭಿಪ್ರಾಯಪಟ್ಟಿದೆ. ಬ್ಯಾಂಕುಗಳು ತಮ್ಮ ಇತರ ಉದರಿ ಬಗೆಗೂ ಹೀಗೆಯೇ ಪರಿವೀಕ್ಷಣೆ ನಡೆಸಬೇಕೆಂದು ಅದು ಹೇಳಿದೆ. ಉದರಿ ಆಯೋಜನೆ ಯಶಸ್ವಿಯಾಗಲು, ಅದನ್ನು ಸಮರ್ಪಕವಾಗಿ ರೂಪಿಸಲು ಅನೇಕ ಅಭಿಕರಣಗಳು ಒಟ್ಟಿಗೆ ದುಡಿಯಬೇಕು. ಅಗ್ರ ಬ್ಯಾಂಕುಗಳು, ಗ್ರಾಮೀಣ ಬ್ಯಾಂಕುಗಳು, ವಾಣಿಜ್ಯ ಬ್ಯಾಂಕುಗಳು, ಸಹಕಾರಿ ಬ್ಯಾಂಕುಗಳು, ರಾಜ್ಯ ಸರ್ಕಾರದ ಸಂಸ್ಥೆಗಳು, ರಿಸರ್ವ್ ಬ್ಯಾಂಕು ಎಲ್ಲವೂ ಒಂದೇ ತರಂಗಾಂತರದಲ್ಲಿ ಉದರಿ ಯೋಜನೆ ರೂಪಿಸಲು, ಅದನ್ನು ವಾಸ್ತವಕ್ಕಿಳಿಸಲು ಧ್ವನಿಸಿದರೆ, ಅದು ಒಟ್ಟಾರೆ ಧ್ವನಿಯಾಗಿ ಎಲ್ಲ ಕಡೆ ಅನುರಣನವಾದೀತು. ಇಲ್ಲಿ ವಿಳಂಬ ಸಲ್ಲದು. ದಕ್ಷ ಸಿಬ್ಬಂದಿ, ಅಗತ್ಯವೆನಿಸಿದರೆ ಗಣಕೀಕರಣ ಎಲ್ಲವೂ ಇದಕ್ಕೆ ಒದಗಬೇಕು. ರೂಪಿಸಿದ ಯೋಜನೆಗಳು ಕಾಲಮಿತಿಯೊಳಗೆ ಜಾರಿಗೆ ಬರಬೇಕು. ಉದರಿ ಆಯೋಜನೆಯ ಒಂದು ಅಂಗವಾಗಿಯೇ ಸೂಕ್ತ ಪರ್ಯಾವರ್ತನೆಗಳನ್ನು ರೂಪಿಸಿ, ಅದಕ್ಕನುಗುಣವಾಗಿ ಬದಲಾವಣೆಗಳನ್ನು ವಿಳಂಬವಿಲ್ಲದೆ ಅಳವಡಿಸಿಕೊಳ್ಳಬೇಕು.

ಒಟ್ಟಾರೆ ಸ್ಥೂಲ ಸೂಕ್ಷ್ಮರೂಪಗಳೆರಡರಲ್ಲೂ ಒಂದು ಸಮರ್ಪಕ ಸಮನ್ವಯವೊಂದನ್ನು ರಿಸರ್ವ್ ಬ್ಯಾಂಕು, ವಾಣಿಜ್ಯ ಬ್ಯಾಂಕುಗಳು, ಇತರ ಹಣಕಾಸು ಸಂಸ್ಥೆಗಳು ಕಂಡುಕೊಂಡು ಉದರಿ ಯೋಜನೆಯನ್ನು ರೂಪಿಸಿ ಅನುಷ್ಠಾನಕ್ಕೆ ತರುವುದರಲ್ಲಿಯೇ ರಾಷ್ಟ್ರದ ಅಭಿವೃದ್ಧಿ, ಹಿತಗಳಿವೆ.

1985ರ ಕೊನೆಯಲ್ಲಿ ದೇಶದ ಎಲ್ಲ ವಾಣಿಜ್ಯ ಬ್ಯಾಂಕುಗಳು ನೀಡಿರುವ ಒಟ್ಟು ಉದರಿಯ ಮೊತ್ತ 52,423 ಕೋಟಿ ರೂ. ಎಂದಾಗ, ಉದರಿಯ ಗಾತ್ರದ ಅಗಾಧತೆಯ ಅರಿವು ಉಂಟಾಗುತ್ತದೆ. ಅಲ್ಲದೆ ಉದರಿಯ ಹರಿವು ಯೋಜಿತ ರೀತಿಯಲ್ಲಿಯೇ ಇರಬೇಕಾದುದರ ಅನಿವಾರ್ಯತೆಯನ್ನೂ ಮನಗಾಣಿಸುತ್ತದೆ.

# ಆಸ್ತಿ-ಹೊಣೆ ತಃಖ್ತೆ: ಬ್ಯಾಂಕರನ ದೃಷ್ಟಿ

ಬಿ. ಎಸ್. ಚಂದ್ರಶೇಖರ

ಕೈಗಾರಿಕಾ ಘಟಕವೊಂದರಲ್ಲಿ ದಿನವಿಡೀ ಉತ್ಪಾದನೆ ನಡೆಯುತ್ತದೆ. ಪ್ರತಿ ದಿನ ಅನೇಕ ಖರ್ಚಿನ ಬಾಬ್ತುಗಳೂ, ಕೆಲವು ಆದಾಯದ ಬಾಬ್ತುಗಳೂ ಇರುತ್ತವೆ; ಹತ್ತಾರು ಮಾರಾಟದ, ಖರೀದಿಯ ವಹಿವಾಟುಗಳು ನಡೆಯುತ್ತವೆ. ಘಟಕದ ವಿವಿಧ ಲೆಕ್ಕ ಪುಸ್ತಕಗಳನ್ನು ತಿರುವಿ ಹಾಕಿದರೂ ಅದರ ಬಂಡವಾಳ, ಬ್ಯಾಂಕ್ ಸಾಲ, ಮಾರಾಟ, ನಗದು ಶಿಲ್ಕು, ವಿನಿಯೋಜನೆ ಮಾಡಲಾದ ಹಣ, ಸರಕಿನ ದಾಸ್ತಾನು, ಯಂತ್ರೋಪಕರಣಗಳ ಮೌಲ್ಯ—ಇಂಥವನ್ನು ಬಿಡಿಬಿಡಿಯಾಗಿ ತಿಳಿದುಕೊಳ್ಳಬಹುದೇ ಹೊರತು ಅದರ ಹಣಕಾಸು ಸ್ಥಿತಿಯ ಬಗೆಗೆ ಒಂದು ಸ್ಪಷ್ಟ ಕಲ್ಪನೆ ಬರುವುದಿಲ್ಲ.

ಕೈಗಾರಿಕೆಗಳು ಆದ್ಯತಾ ಕ್ಷೇತ್ರವೆಂದು ಪರಿಗಣಿಸಲ್ಪಟ್ಟಿದ್ದು ಬ್ಯಾಂಕ್ ಮುಂಗಡಗಳಲ್ಲಿ ಸಿಂಹಪಾಲನ್ನು ಪಡೆದಿರುವುದು ನಮಗೆ ತಿಳಿದ ವಿಷಯವೇ. ಕೈಗಾರಿಕಾ ಘಟಕವೊಂದಕ್ಕೆ ಹಣಕಾಸು ನೆರವು ನೀಡಿ ಅದರ ಸ್ವಸ್ಥತೆಯ ಬಗ್ಗೆ ಕಳಕಳಿ ಹೊಂದಿರುವ ಬ್ಯಾಂಕರನಿಗೆ ಆ ಘಟಕದ ಹಣಕಾಸು ಸ್ಥಿತಿಯ ಒಂದು ಸ್ಪಷ್ಟ ಚಿತ್ರ ಬೇಕು. ಘಟಕದ ಹಣಕಾಸು ಸ್ಥಿತಿಯ ಒಂದು ಸ್ಪಷ್ಟ ಚಿತ್ರವನ್ನು ಪಡೆಯಲು ಬ್ಯಾಂಕರ್ ಅದರ ಆಸ್ತಿ-ಹೊಣೆ ತಃಖ್ತೆಯ ಮೊರೆ ಹೊಗುತ್ತಾನೆ.

ಆಸ್ತಿ-ಹೊಣೆ ತಃಖ್ತೆ ಕುರಿತು ಸಾಲಿಗ ಬ್ಯಾಂಕರನ ದೃಷ್ಟಿಯನ್ನು ಸ್ಪಷ್ಟಪಡಿಸಿ, ಆ ದೃಷ್ಟಿಯಿಂದ ತಃಖ್ತೆಯನ್ನು ವಿಶ್ಲೇಷಿಸುವ ರೀತಿಯನ್ನು ಪರಿಚಯಿಸುವುದು ಈ ಲೇಖನದ ಉದ್ದೇಶ. ಇದಕ್ಕೆ ಪೀಠಿಕೆಯಾಗಿ ಆಸ್ತಿ ಹೊಣೆಗಳ ವರ್ಗೀಕರಣ ಕ್ರಮವನ್ನೂ ಸ್ಥೂಲವಾಗಿ ತಿಳಿಸಿ ಆಸ್ತಿ-ಹೊಣೆ ತಃಖ್ತೆಗಳ ಸ್ವರೂಪವನ್ನೂ ಅನುಕೂಲಗಳನ್ನೂ ಗುರುತಿಸಲಾಗಿದೆ. ಈ ಲೇಖನದ ವ್ಯಾಪ್ತಿಯನ್ನು ಸಣ್ಣ ಕೈಗಾರಿಕೆಗಳ ಹಣಕಾಸು ತಃಖ್ತೆಗಳಿಗೆ ಸೀಮಿತಗೊಳಿಸಲಾಗಿದೆ.

* ಬಿ. ಎಸ್. ಚಂದ್ರಶೇಖರ, ಅಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್

## ಆಸ್ತಿ-ಹೊಣೆ ತಃಖ್ತೆ ಎಂದರೇನು ?

ಒಂದು ಗೊತ್ತಾದ ದಿನಾಂಕದಲ್ಲಿದ್ದಂತೆ ತನ್ನ ಹಣಕಾಸು ಸ್ಥಿತಿಯನ್ನು ನಿಖರವಾಗಿ ತಿಳಿಸುವ ಒಂದು ತಃಖ್ತೆಯನ್ನು ಸಾಮಾನ್ಯವಾಗಿ ಎಲ್ಲ ಸಂಸ್ಥೆಗಳೂ ತಯಾರಿಸುತ್ತವೆ. ಸಂಸ್ಥೆ ಸ್ಥಾಪಿತವಾದಂದಿನಿಂದ ದಾಖಲಾದ ಎಲ್ಲ ಲೆಕ್ಕ ವಹಿವಾಟುಗಳ ಸಂಚಿತ ಪರಿಣಾಮವನ್ನು (Cumulative result) ಆ ತಃಖ್ತೆ ಸ್ಪಷ್ಟವಾಗಿ ಪ್ರತಿಫಲಿಸುತ್ತದೆ. ಆ ತಃಖ್ತೆಯೇ ಆಥಾವೆ ಪತ್ರಿಕೆ ಅಥವಾ ಆಸ್ತಿ-ಹೊಣೆ ತಃಖ್ತೆ.

ಆಸ್ತಿ-ಹೊಣೆ ತಃಖ್ತೆಯನ್ನು "ಒಂದು ಘಟಕದ ಆಸ್ತಿಗಳು, ಮತ್ತು ಈ ಆಸ್ತಿಗಳಲ್ಲಿ ಆ ಘಟಕದ ಮಾಲೀಕರ ಮತ್ತು ಧನಿಗಳ ಹಕ್ಕುಗಳು—ಇವುಗಳ ಪಟ್ಟಿ" ಎಂದು ವ್ಯಾಖ್ಯೆ ಮಾಡಲಾಗಿದೆ.

ಸರಳವಾಗಿ ಹೇಳಬೇಕೆಂದರೆ, ಒಂದು ಗೊತ್ತಾದ ದಿನಾಂಕದಲ್ಲಿ ಇದ್ದಂತೆ ಘಟಕವೊಂದರ ಎಲ್ಲ ಆಸ್ತಿಗಳ ಮತ್ತು ಅದಕ್ಕೆ ಪ್ರತಿಯಾದ (ಬಂಡವಾಳವೂ ಸೇರಿದಂತೆ) ಎಲ್ಲ ಹೊಣೆಗಳ ಪುಸ್ತಕ ಮೌಲ್ಯವನ್ನು ಸೂಚಿಸುವ ತಃಖ್ತೆಯನ್ನು ಆಸ್ತಿ-ಹೊಣೆ ತಃಖ್ತೆ ಎನ್ನಬಹುದು. ಘಟಕದ ನಗದು ಶಿಲ್ಕು, ಬ್ಯಾಂಕ್ ಧನಿಕೆ ಶಿಲ್ಕು, ವಿನಿಯೋಜನೆ ಮಾಡಿದ ಹಣ, ಯಂತ್ರೋಪಕರಣಗಳ ಅಥವಾ ಕಟ್ಟಡದ ಪುಸ್ತಕ ಮೌಲ್ಯ, ಕಚ್ಚಾ ಸಾಮಗ್ರಿ, ಪ್ರಕ್ರಿಯೆಯಲ್ಲಿರುವ ಸರಕು, ಸಿದ್ಧ ಸರಕು ಮುಂತಾದವುಗಳ ದಾಸ್ತಾನು, ವಿವಿಧ ಋಣಿಗಳು—ಇವು ಆಸ್ತಿಗಳಿಗೆ ಕೆಲವು ಉದಾಹರಣೆಗಳಾದರೆ, ಬಂಡವಾಳ, ಬ್ಯಾಂಕ್ ಋಣಿಕೆ ಶಿಲ್ಕು, ವಿವಿಧ ಧನಿಗಳು, ಇತರ ಸಾಲಗಳು—ಇವು ಹೊಣೆಗಳಿಗೆ ಕೆಲವು ಉದಾಹರಣೆಗಳು.

## ಆಸ್ತಿ ಹೊಣೆಗಳ ವರ್ಗೀಕರಣ

ಆಸ್ತಿ-ಹೊಣೆ ತಃಖ್ತೆಯಲ್ಲಿ ವಿವಿಧ ಶೀರ್ಷಿಕೆಗಳಡಿ ಆಸ್ತಿಗಳನ್ನು ಮತ್ತು ಹೊಣೆಗಳನ್ನು ವಿಂಗಡಿಸಲಾಗಿರುತ್ತದೆ. ಒಂದೇ ರೀತಿಯ ಆಸ್ತಿಗಳನ್ನು ಅಥವಾ ಹೊಣೆಗಳನ್ನು ಆಧರಿಸಿ ಗುಂಪುಮಾಡಿ ತಃಖ್ತೆಯಲ್ಲಿ ತೋರಿಸಿರುವುದರಿಂದ—

(1) ಒಂದು ಗುಂಪಿನ ಆಸ್ತಿಗಳ ಅಥವಾ ಹೊಣೆಗಳ ಮೊತ್ತವನ್ನು ಇನ್ನೊಂದರ ಮೊತ್ತಕ್ಕೆ ಸುಲಭವಾಗಿ ಹೋಲಿಸಬಹುದು.

(2) ಬೇರೆಬೇರೆ ದಿನಾಂಕಗಳಲ್ಲಿದ್ದಂತೆ ತಯಾರಿಸಲಾದ ಆಸ್ತಿ-ಹೊಣೆ ತಃಖ್ತೆಗಳಲ್ಲಿ ಒಂದೇ ಗುಂಪಿನ ಆಸ್ತಿಗಳನ್ನು, ಹೊಣೆಗಳನ್ನು ಪರಸ್ಪರ ಹೋಲಿಸುವುದಕ್ಕೆ ಅನುಕೂಲವಾಗುತ್ತದೆ.

ಹೀಗೆ ವರ್ಗೀಕರಣಮಾಡಿ ಆಸ್ತಿ ಹೊಣೆಗಳನ್ನು ಪಟ್ಟಿ ಮಾಡಿದಾಗ ಅದಕ್ಕೆ ಈ ರೂಪ ಬರಬಹುದು :

### ಸಮನ್ವಯ ಉತ್ಪನ್ನಗಳು

ತಾ. ೩-೧೦-೧೯೮೪ರಲ್ಲಿದ್ದಂತೆ

ಆಸ್ತಿ-ಹೊಣೆ ತಃಖ್ತೆ

| ಹೊಣೆಗಳು | ರೂ. | ಆಸ್ತಿಗಳು | ರೂ. |
|---|---|---|---|
| ಚಾಲ್ತಿ ಹೊಣೆಗಳು : | | ಚಾಲ್ತಿ ಆಸ್ತಿಗಳು : | |
| ಕನ್ನಡ ಬ್ಯಾಂಕಿನಿಂದ ಸಾಲ | | ನಗದು ಸಿಲ್ಕು | |
| ವಿವಿಧ ಧನಿಗಳು | | ಬ್ಯಾಂಕ್ ಖಾತೆ ಸಿಲ್ಕು | |
| ಗ್ರಾಹಕರಿಂದ ಮುಂಗಡ | | ದಾಸ್ತಾನು : (1) ಕಚ್ಚಾ ಸಾಮಗ್ರಿ | |
| ಮಾರಾಟ ತೆರಿಗೆ | | (2) ಪ್ರಕ್ರಿಯೆಯಲ್ಲಿರುವ ಸರಕು | |
| | | (3) ಸಿದ್ಧ ಸರಕು | |

| ದೀರ್ಘಾವಧಿ ಹೊಣೆಗಳು : | ರೂ. | ವಿವಿಧ ಋಣಿಗಳು | ರೂ. |
|---|---|---|---|
| ರಾಜ್ಯ ಸರಕಾರದ ನಿರ್ದೇಶನಾಲಯದಿಂದ ಪಡೆದ ಬೀಜಧನ | | ವಿನಿಯೋಜನೆಗಳು : | |
| ಭಾರತೀಯ ಸ್ಟೇಟ್ ಬ್ಯಾಂಕಿನಿಂದ ಪಡೆದ ಅವಧಿ ಸಾಲ | | ಕಲ್ಪವೃಕ್ಷ ಟ್ರಸ್ಟ್ | |
| | | ದೀರ್ಘಾವಧಿ ಆಸ್ತಿಗಳು | |
| ಪಾಲುದಾರರ ಬಂಡವಾಳ : | | ಅನುಲಕ ಕಂಪನಿಯ ಷೇರುಗಳು | |
| ಬಂಡವಾಳ | | ಕಟ್ಟಡಗಳು | |
| ಲಾಭ | | ಯಂತ್ರಗಳು | |
| ಕಮ್ಮಟ ವಿೂಸಲು | | ಇತರೆ : | |
| ಒಟ್ಟು | | ಪಾಲುದಾರರ ಖಾತೆ ಸಿಲ್ಕು | |
| | | ಅಮೂರ್ತ ಆಸ್ತಿಗಳು : | |
| | | ಸುನಾಮ | |
| | | ನಷ್ಟ (ಇದ್ದಲ್ಲಿ) | |
| | | ಒಟ್ಟು | |

[ಟಿಪ್ಪಣಿ : ಉಪಶೀರ್ಷಿಕೆಗಳಡಿ ಕೊಟ್ಟಿರುವ ಆಸ್ತಿ ಹೊಣೆಗಳು ಕೇವಲ ಉದಾಹರಣೆಗಾಗಿ. ಈ ಪಟ್ಟಿಗಳು ಸಮಗ್ರವಲ್ಲ.]

**ಆಸ್ತಿ-ಹೊಣೆ ತಃಖ್ತೆಯ ಅನುಕೂಲಗಳು :** ಆಸ್ತಿ ಹೊಣೆ ತಃಖ್ತೆಗಳಿಂದ ಸಂಸ್ಥೆಗೆ ಹಲವು ಅನುಕೂಲಗಳುಂಟು. ಮುಖ್ಯವಾದ ಅನುಕೂಲಗಳಲ್ಲಿ ಇವು ಕೆಲವು : (1) ಒಂದು ಗೊತ್ತಾದ ದಿನಾಂಕದಲ್ಲಿದ್ದಂತೆ ಸಂಸ್ಥೆಯ ಆಸ್ತಿಗಳು ಮತ್ತು ಹೊಣೆಗಳ ಮೌಲ್ಯವನ್ನು ತೋರಿಸುವುದರ ಮೂಲಕ ಸಂಸ್ಥೆಯ ಹಣಕಾಸು ಸ್ಥಿತಿಯ ಒಂದು ಒಟ್ಟು ಚಿತ್ರ ದೊರೆಯುತ್ತದೆ. (2) ವಿವಿಧ ದಿನಾಂಕಗಳ ಆಸ್ತಿ-ಹೊಣೆ ತಃಖ್ತೆಗಳಲ್ಲಿ ಒಂದೇ ರೀತಿಯ ಆಸ್ತಿ ಅಥವಾ ಹೊಣೆಗಳ ಹೋಲಿಕೆಯಿಂದ ಹಣ ವಿನಿಯೋಜನೆಯ ಗತಿ (ದಿಕ್ಕು) ತಿಳಿಯುತ್ತದೆ. ಇಂಥ ಹೋಲಿಕೆಯಿಂದ ಸಂಸ್ಥೆಯ ಬೆಳವಣಿಗೆಯನ್ನು ಗುರುತಿಸಲು ಸಾಧ್ಯವಾಗುತ್ತದೆ. (3) ಆಸ್ತಿ-ಹೊಣೆ ತಃಖ್ತೆಯ ವಿವಿಧ ಬಾಬ್ತುಗಳ ಪರಸ್ಪರ ಸಂಬಂಧವನ್ನು ಲೆಕ್ಕಾಚಾರಮಾಡಿ ನೋಡಿದಾಗ ಸಂಸ್ಥೆಯ ಹಣಕಾಸು ಯೋಜನೆಗೆ ನೆರವಾಗುವಂಥ ಸಂಗತಿಗಳು ಅರಿವಿಗೆ ಬರುತ್ತವೆ.

## ಬ್ಯಾಂಕರನಿಗೆ ಏಕೆ ?

ಹಣಕಾಸು ಸ್ಥಿತಿಯಲ್ಲಿನ ದೌರ್ಬಲ್ಯಗಳ ನಿಶ್ಚಿತವಾದ ಒಂದು ಪರಿಣಾಮವೆಂದರೆ— ಉತ್ಪಾದನೆ ಕುಂಠಿತವಾಗುವುದು. ತನ್ನ ಹಣಕಾಸು ಸ್ಥಿತಿಯನ್ನು ನಿಖರವಾಗಿ ತಿಳಿದುಕೊಳ್ಳಲು ಸಂಸ್ಥೆಯೊಂದರ ಒಡೆಯರಿಗೆ ತವಕವಿರುವುದು ಸಹಜ. ಏಕೆಂದರೆ ಸಂಸ್ಥೆಯಲ್ಲಿ ಅವರ ಹಣ ಬಂಡವಾಳದ ರೂಪದಲ್ಲಿ ವಿನಿಯೋಜನೆಯಾಗಿದ್ದು, ಸಂಸ್ಥೆಯ ಹಣಕಾಸು ಸ್ಥಿತಿ ಏರುಪೇರಾದರೆ ಅವರಿಗೆ ನಷ್ಟವಾಗುವ ಸಾಧ್ಯತೆಗಳುಂಟು. ಸಾಲ ನೀಡಿರುವ ಬ್ಯಾಂಕರನ ಹಣವೂ ಸಾಕಷ್ಟು ಪ್ರಮಾಣದಲ್ಲಿ ಸಂಸ್ಥೆಯಲ್ಲಿ ತೊಡಗಿಸಲ್ಪಟ್ಟಿರುವುದರಿಂದ ಬ್ಯಾಂಕರನೂ ಸಂಸ್ಥೆಯ ಹಣಕಾಸು ತಃಖ್ತೆಯಲ್ಲಿ ಆಸಕ್ತಿ ಹೊಂದಿರುವುದು ಸಹಜ. ತೊಡಗಿಸಲಾದ ಒಟ್ಟು ಹಣದಲ್ಲಿ ಉದ್ಯಮಿಯ ಪಾಲಿಗಿಂತ ಬ್ಯಾಂಕರನ ಪಾಲೇ ಅಧಿಕವಾಗಿರುವುದು ಸಣ್ಣ ಕೈಗಾರಿಕೆಗಳ ಸಂದರ್ಭದಲ್ಲಿ ಸಾಮಾನ್ಯಸಂಗತಿ. ಆದ್ದರಿಂದ ಬ್ಯಾಂಕರ್ ಸಾಲಗಾರ ಸಂಸ್ಥೆಯ ಆಸ್ತಿ-ಹೊಣೆ ತಃಖ್ತೆಯನ್ನು ಗಂಭೀರವಾಗಿ ಪರಿಗಣಿಸುತ್ತಾನೆ.

ಆಸ್ತಿ-ಹೊಣೆ ತಃಖ್ತೆಗಳಿಂದ ಸಂಸ್ಥೆಗೆ ದೊರೆಯುವ (ಈ ಮೊದಲು ಹೇಳಿದ) ಅನುಕೂಲಗಳು ಬ್ಯಾಂಕರನಿಗೂ ಲಭ್ಯವಾಗುತ್ತವೆ. ಆಸ್ತಿ-ಹೊಣೆ ತಃಖ್ತೆಗಳನ್ನು ಅಧ್ಯಯನ ಮಾಡಿ ಸಂಸ್ಥೆಯ ಬ್ಯಾಂಕ್ ಖಾತೆಯಲ್ಲಿನ ವಹಿವಾಟುಗಳ ಬೆಳಕಿನಲ್ಲಿ ಮತ್ತು ಸಂಸ್ಥೆಯ ಪ್ರಸಕ್ತ ಉತ್ಪಾದನೆಯ ಮಟ್ಟದ ಹಿನ್ನೆಲೆಯಲ್ಲಿ ಅದನ್ನು ವಿಶ್ಲೇಷಣೆ ಮಾಡಿದಾಗ ತಾನು ನೀಡಿದ ಸಾಲಗಳನ್ನು ಸಂಸ್ಥೆ ಸದುಪಯೋಗಪಡಿಸಿಕೊಂಡಿದೆಯೇ ಇಲ್ಲವೇ ಎಂಬ ವಿಷಯ ಬ್ಯಾಂಕರನಿಗೆ ತಿಳಿಯುತ್ತದೆ. ಮುಂದೆ ಆ ಸಂಸ್ಥೆಯ ಉದರಿ ಅಗತ್ಯಗಳ ನಿರ್ಧಾರಣ ಸುಲಭವಾಗುತ್ತದೆ.

ಸಾಮಾನ್ಯವಾಗಿ ಬ್ಯಾಂಕುಗಳು ಉದ್ಯಮಘಟಕಗಳಿಗೆ ತಾವು ನೀಡುವ ದುಡಿಮೆ ಬಂಡವಾಳ ಮುಂಗಡಗಳನ್ನು ವರುಷಕ್ಕೊಮ್ಮೆ ಮರುಪರಿಶೀಲಿಸುವ (review) ಪರಿಪಾಟಿಯನ್ನಿಟ್ಟುಕೊಂಡಿದ್ದು ಪ್ರತಿವರ್ಷವೂ ಪ್ರತಿಯೊಂದು ಘಟಕದ ಆಸ್ತಿ-ಹೊಣೆ ತಃಖ್ತೆಯನ್ನು ಅಧ್ಯಯಿಸಿ ಮುಂಗಡಗಳನ್ನು ಅಗತ್ಯಕ್ಕೆ ತಕ್ಕಂತೆ ಏರಿಸುವ, ನವೀಕರಿಸುವ ಅಥವಾ ಇಳಿಸುವ ಪದ್ಧತಿ ಜಾರಿಯಲ್ಲಿದೆ. ಉದ್ಯಮ ಘಟಕವೊಂದು ಅಸ್ವಸ್ಥತೆಯ ಸೂಚನೆಗಳನ್ನು ತೋರಿದ್ದರೆ, ಅಸ್ವಸ್ಥತೆಗೆ ಕಾರಣಗಳನ್ನು ಗುರುತಿಸಿ ಯುಕ್ತಕ್ರಮ ಕೈಗೊಳ್ಳಲಾಗುತ್ತದೆ. ಆಸ್ತಿ-ಹೊಣೆ ತಃಖ್ತೆಗಳಿಂದ ನಿಧಿಗಳ ದಿಕ್ಚ್ಯುತಿ (diversion of funds) ಸಾಬೀತಾದರೆ ಮುಂಗಡಗಳ ಮರುಪಾವತಿಗೆ ಕರೆ ನೀಡುವುದೂ ಸಾಧ್ಯ.

## ಬ್ಯಾಂಕರ್ ಕೇಳುವುದು ಎಂಥ ಆಸ್ತಿ-ಹೊಣೆ ತಃಖ್ತೆ ?

ಬ್ಯಾಂಕರ್ ತಾನು ಸಾಲ ನೀಡಿರುವ ಘಟಕವೊಂದರ ಆಸ್ತಿ-ಹೊಣೆ ತಃಖ್ತೆಯನ್ನು ಪಡೆಯುವಾಗ ಈ ಅಂಶಗಳನ್ನು ಗಮನಿಸುತ್ತಾನೆ :

(1) ತಃಖ್ತೆ ಇತ್ತೀಚಿನ ಒಂದು ದಿನಾಂಕದಲ್ಲಿದ್ದಂತೆ ಇರಬೇಕು. (ಇಲ್ಲಿ ಇತ್ತೀಚಿನ ದಿನಾಂಕ ಎಂದರೆ ಸಾಮಾನ್ಯವಾಗಿ 6 ತಿಂಗಳ ಒಳಗಿನ ದಿನಾಂಕ).

(2) ಆಸ್ತಿ-ಹೊಣೆ ತಃಖ್ತೆ ಸನ್ನದು ಲೆಕ್ಕಿಗರಿಂದ ಪರಿಶೋಧನೆಯಾಗಿದ್ದು ಅವರಿಂದ ಪ್ರಮಾಣೀಕೃತವಾಗಿರಬೇಕು, ಸಂಸ್ಥೆಯ ಪರವಾಗಿ ಪ್ರಾಧಿಕೃತರು ಮಾಡಿದ ಸಹಿ ಹೊಂದಿರಬೇಕು. ಪರಿಶೋಧನೆಯಾದ ತಃಖ್ತೆ ಆರು ತಿಂಗಳಿಗಿಂತ ಹಳೆಯದಾಗಿದ್ದರೆ

ಇತ್ತೀಚಿನ ದಿನಾಂಕವೊಂದರಲ್ಲಿದ್ದಂತೆ ಆಸ್ತಿ-ಹೊಣೆ ತಃಖ್ತೆಯ ನಕಲನ್ನು ಬ್ಯಾಂಕರ್ ಕೇಳಿ ಪಡೆಯುತ್ತಾನೆ.

(3) ಆಸ್ತಿ-ಹೊಣೆ ತಃಖ್ತೆ ಲಾಭ-ನಷ್ಟ ಖಾತೆಯೊಡನೆ ಸಲ್ಲಿಸಲ್ಪಡಬೇಕು.

### ಬ್ಯಾಂಕರನ ವಾಸ್ತವ ದೃಷ್ಟಿ

ಉದ್ಯಮ ಘಟಕ ತನ್ನ ಆಸ್ತಿ-ಹೊಣೆ ತಃಖ್ತೆಯನ್ನು ಬ್ಯಾಂಕರನಿಗೆ ಬೇಕಾದ ರೀತಿಯಲ್ಲಿ ಸಲ್ಲಿಸಿದ ಮೇಲೆ ಬ್ಯಾಂಕರ್ ಅದರ ಪರಿಶೀಲನೆಗೆ ತೊಡಗುತ್ತಾನೆ.

ತಾನು ನೀಡಿದ ಸಾಲಕ್ಕೆ ತಕ್ಕಷ್ಟು ಪ್ರಾಥಮಿಕ ಆಧಾರ ಇದೆಯೇ ? ನಿಗದಿಪಡಿಸಲಾದ ಭಾಗಾಂಶಗಳನ್ನು (Margins) ಘಟಕ ಉಳಿಸಿಕೊಂಡಿದೆಯೆ ? ಘಟಕದ ಬಾಹ್ಯ ಹೊಣೆಗಳು ತಾನು ನೀಡಿದ ಸಾಲದ ಆಧಾರವನ್ನು ಮೊಟಕುಗೊಳಿಸುತ್ತವೆಯೆ ? ಸ್ವಂತ ಬಂಡವಾಳ ವ್ಯವಹಾರದ ಗಾತ್ರಕ್ಕೆ ತಕ್ಕಷ್ಟಿದೆಯೇ ? ಆಸ್ತಿ, ಹೊಣೆಗಳೆಂದು ತೋರಿಸಲಾದ ವಿವಿಧ ಋಣಿಗಳು, ದಾಸ್ತಾನು, ಯಂತ್ರೋಪಕರಣ ಮುಂತಾದ ಆಸ್ತಿಗಳ ಗುಣಮಟ್ಟ (quality) ಏನು ? ಬ್ಯಾಂಕಿನ ಹಿತಕ್ಕೆ ಧಕ್ಕೆಯಾಗುವ ಅಂಶಗಳು ಆಸ್ತಿ-ಹೊಣೆ ತಃಖ್ತೆಯಿಂದ ತಿಳಿದುಬರುತ್ತವೆಯೆ ?—ಇಂಥ ಅನೇಕ ದೃಷ್ಟಿಗಳಿಂದ ಬ್ಯಾಂಕರ್ ಆಸ್ತಿ-ಹೊಣೆ ತಃಖ್ತೆಗಳನ್ನು ಅಧ್ಯಯಿಸಬೇಕಾಗುತ್ತದೆ. ತಃಖ್ತೆಯಲ್ಲಿ ನಮೂದಿಸಿದ ಅಂಕಿಗಳನ್ನು ವಿವಿಧ ದೃಷ್ಟಿಗಳಿಂದ ಪರೀಕ್ಷಿಸದೆ ಸ್ವೀಕರಿಸುವುದು ಬ್ಯಾಂಕರನ ಲಕ್ಷಣವಲ್ಲ. ಸಮರ್ಥನಾದ ಬ್ಯಾಂಕರ್ ಉದ್ಯಮಘಟಕದ ಖಾತೆಯ ನಿರ್ವಹಣೆ, ಋಣಿಕೆ/ಧನಿಕೆ ವಹಿವಾಟುಗಳ ಮೊತ್ತಗಳು, ತನಗೆ ಈ ಮೊದಲು ಸಲ್ಲಿಸಲಾದ ಸರಕು ತಃಖ್ತೆಗಳು, ಘಟಕದ ಹುಂಡಿ ಖಾತೆ ಮುಂತಾದವನ್ನು ಗಮನಿಸಿ ಆಸ್ತಿ-ಹೊಣೆ ತಃಖ್ತೆಯಲ್ಲಿನ ಅಂಕಿಗಳ ಸತ್ಯತೆಯನ್ನು ಒರೆಗೆ ಹಚ್ಚುತ್ತಾನೆ. ಜತೆಗೆ ಉದ್ಯಮಘಟಕದ ಚಾಲ್ತಿ ಉತ್ಪಾದನಮಟ್ಟ, ಮಾರಾಟ, ವಿವಿಧ ಧನಿಗಳಿಗೆ ಸಲ್ಲಬೇಕಾದ ಮೊಬಲಗು, ವಿವಿಧ ಋಣಿಗಳಿಂದ ಬರಬೇಕಾದ ಬಾಕಿ, ಘಟಕದ ಉತ್ಪನ್ನಗಳಿಗಾಗಿ ಸ್ಥಿರೀಕೃತ ಆದೇಶಗಳು (firm order) ಮತ್ತು ಬರಲಿರುವ ವರ್ಷಕ್ಕೆ ನಿರೀಕ್ಷಿತ ಉತ್ಪಾದನೆ ಇತ್ಯಾದಿ ವಿವರಗಳನ್ನು ಸಾಲಪಡೆದ ಘಟಕದಿಂದ ಪಡೆದುಕೊಳ್ಳುತ್ತಾನೆ. ಈ ವಿವರಗಳನ್ನು ಆಸ್ತಿ-ಹೊಣೆ ತಃಖ್ತೆಯ ಅಂಕಿಗಳಿಗೆ ಹೋಲಿಸಲು ಮತ್ತು ಘಟಕದ ದುಡಿಮೆ ಬಂಡವಾಳ ಅಗತ್ಯಗಳ ನಿರ್ಧಾರಣ ಮಾಡಲು ಬ್ಯಾಂಕರ್ ಬಳಸಿಕೊಳ್ಳುತ್ತಾನೆ.

ಉದ್ಯಮಿಗಳು ತಮ್ಮ ಆಸ್ತಿ-ಹೊಣೆ ತಃಖ್ತೆಗಳಲ್ಲಿ ಸತ್ಯಾಂಶಗಳನ್ನು ಹೇಗೆ ಮರೆಮಾಡುವರೆಂಬುದರ ಪರಿಚಯ ಇಲ್ಲದವರಿಗೆ ಇಷ್ಟೆಲ್ಲ ಎಚ್ಚರಿಕೆಗಳ ಅಗತ್ಯವೇನಿದೆ ಎನ್ನಿಸಬಹುದು. ಆಸ್ತಿ-ಹೊಣೆ ತಃಖ್ತೆಯಲ್ಲಿರುವ ಅಂಕಿಗಳು ಕೇವಲ ಜಾದೂವಿನಿಂದ ಬಂದವಲ್ಲ ; ಅವು ಸಂಸ್ಥೆ ಸ್ಥಾಪಿತವಾದಂದಿನಿಂದ (ತಃಖ್ತೆಯ ದಿನಾಂಕದವರೆಗೆ) ದಾಖಲಾದ ಎಲ್ಲ ವಹಿವಾಟುಗಳ ಸಂಚಿತ ಪರಿಣಾಮ ಎಂಬುದನ್ನು ಬ್ಯಾಂಕರ್ ಖಚಿತಪಡಿಸಿಕೊಳ್ಳದಿದ್ದರೆ ಅವನು ನೀಡುವ ಮುಂಗಡಗಳ ಗುಣಮಟ್ಟ ಕುಸಿಯುವ ಸಂಭವಗಳೇ ಹೆಚ್ಚು.

### ಉದ್ಯಮಿಯೊಡನೆ ಚರ್ಚೆ

ಆಸ್ತಿ-ಹೊಣೆ ತಃಖ್ತೆಗಳನ್ನು ಅಧ್ಯಯನ ಮಾಡಿದ ಮೇಲೆ ಉದ್ಯಮಿಯನ್ನು ಬ್ಯಾಂಕಿಗೆ ಆಹ್ವಾನಿಸಿ, ಬ್ಯಾಂಕರ್ ಆಸ್ತಿ-ಹೊಣೆ ತಃಖ್ತೆಯಲ್ಲಿನ ವಿವಿಧ ಅಂಶಗಳನ್ನು ಕುರಿತು ಕೂಲಂಕಷವಾಗಿ ಚರ್ಚೆ ನಡೆಸುತ್ತಾನೆ. ಇಂಥ ಚರ್ಚೆಯಿಂದ ಬ್ಯಾಂಕರನಿಗೆ ಘಟಕದ ಪ್ರಸಕ್ತ ಹಣಕಾಸು ಪರಿಸ್ಥಿತಿ ಚೆನ್ನಾಗಿ ಮನದಟ್ಟಾಗುತ್ತದೆ. ಆಸ್ತಿ-ಹೊಣೆ ತಃಖ್ತೆಗಳು ಕೃತ್ರಿಮ ನಿರ್ಮಿತವಾಗಿದ್ದಲ್ಲಿ ವಾಸ್ತವಾಂಶಗಳು ಉದ್ಯಮಿಯ ಬಾಯಿಂದಲೇ ಹೊರಬೀಳುವ ಸಂಭವಗಳೂ ಉಂಟು.

### ಆಸ್ತಿ-ಹೊಣೆಗಳ ಮರುವರ್ಗೀಕರಣ

ತಾನು ನಡೆಸುವ ಪರಿಶೀಲನೆಗಳ ಹಾಗೂ ಚರ್ಚೆಗಳ ಆಧಾರದಿಂದ ಆಸ್ತಿ-ಹೊಣೆ ತಃಖ್ತೆಯಲ್ಲಿ ತೋರಿಸಲಾದ ವಿವಿಧ ಆಸ್ತಿಗಳ/ಹೊಣೆಗಳ ಸ್ವರೂಪ ಬ್ಯಾಂಕರನಿಗೆ ಸ್ಪಷ್ಟವಾಗುತ್ತದೆ ; ಆಗ ತನ್ನದೇ ಆದ ರೀತಿಯಲ್ಲಿ ಬ್ಯಾಂಕರ್ ಅವುಗಳನ್ನು ವರ್ಗೀಕರಿಸಲು ಅನುಕೂಲವಾಗುತ್ತದೆ. ಉದಾ : (1) ದೀರ್ಘಕಾಲಿಕ ಸಾಲವೆಂದು ನಮೂದಿಸಲಾದ ರೂ. 5 ಲಕ್ಷದಲ್ಲಿ ರೂ. 25,000/ ಚಾಲ್ತಿ ಹೊಣೆಯಾಗಿರಬಹುದು. (2) ಸುನಾಮವೆಂದು ತೋರಿಸಲಾದ ಮೊತ್ತ ನಷ್ಟವೇ ಆಗಿರಬಹುದು (3) ಚಾಲ್ತಿ ಆಸ್ತಿ ಎಂದು ನಮೂದಿಸಲಾದ ಕಚ್ಚಾ ಸಾಮಗ್ರಿಯ ದಾಸ್ತಾನಿನಲ್ಲಿ ಬಹುಭಾಗ ಜಡವಾಗಿದ್ದು (stagnant) ಸದ್ಯಕ್ಕೆ ಯಾವ ಪ್ರಯೋಜನಕ್ಕೂ ಬಾರದ ಅಮೂರ್ತ ಆಸ್ತಿಯಾಗಿರಬಹುದು. (4) ಚಾಲ್ತಿ ಹೊಣೆಯೆನ್ನಲಾದ ಬಾಬ್ತೊಂದು ದೀರ್ಘಾವಧಿ ಸಾಲವಾಗಿರಬಹುದು. (5) ವಿನಿಯೋಜನೆ ಎಂಬ ಹೆಸರಿನೆದುರು ತೋರಿಸಿರುವ ಮೊಬಲಗು ಪಾಲುದಾರರು ಸ್ವಂತಕ್ಕೆ ಬಳಸಿಕೊಂಡ ಹಣವಾಗಿರುವುದೂ ಸಾಧ್ಯ.

ಆಸ್ತಿ ಹೊಣೆಗಳ ನಿಜಸ್ವರೂಪ ಬಯಲಾದರೆ ತಮಗೆ ದೊರೆತಿರುವ ಉದರಿ ಸೌಲಭ್ಯಗಳು ಮೊಟಕಾಗುವುವೆಂಬ ಭಾವನೆಯಿಂದ ಉದ್ಯಮಿಗಳು ಹೀಗೆ ಆಸ್ತಿ-ಹೊಣೆ ತಃಖ್ತೆಗಳನ್ನು ಮಾರ್ಪಡಿಸಿ ಒಳ್ಳೆಯ ರೂಪ ತೋರಿಸುವುದುಂಟು. ಬ್ಯಾಂಕರ್ ನಡೆಸುವ ಚರ್ಚೆಗಳಲ್ಲಿ ಉದ್ಯಮಿ ಅದನ್ನು ಸಮರ್ಥಿಸಿಕೊಳ್ಳಲು ಪ್ರಯತ್ನಿಸಲೂಬಹುದು. ಆದರೆ ಬ್ಯಾಂಕರ್ ತನ್ನ ವಾಸ್ತವದೃಷ್ಟಿಯನ್ನು ಬಲಿಕೊಡಬಾರದು, ಉದಾ: ಕಚ್ಚಾ ಸಾಮಗ್ರಿಯ ಮೌಲ್ಯವನ್ನು ಗಣಿಸುವಾಗ ಖರೀದಿ ಮೌಲ್ಯ ಅಥವಾ ಮಾರುಕಟ್ಟೆ ಮೌಲ್ಯದಲ್ಲಿ ಯಾವುದು ಕಡಮೆಯೋ ಅದನ್ನು ಲೆಕ್ಕಕ್ಕೆ ತೆಗೆದುಕೊಳ್ಳಬೇಕು. ಆಸ್ತಿಗಳ ಪ್ರಸಕ್ತ ಮೌಲ್ಯದ ಏರಿಕೆ ನಿಷಿದ್ಧ. ಏಕೆಂದರೆ ವಾಸ್ತವವಾಗಿ ಆಸ್ತಿಯನ್ನು ಮಾರಾಟ ಮಾಡುವವರೆಗೆ ಗಳಿಕೆಯನ್ನು ಬ್ಯಾಂಕರ್ ಪರಿಗಣಿಸುವುದಿಲ್ಲ.

ಉಂಟಾದ ಅಥವಾ ಉಂಟಾಗಬಹುದಾದ ಎಲ್ಲ ನಷ್ಟಗಳನ್ನೂ ಲೆಕ್ಕಕ್ಕೆ ತೆಗೆದುಕೊಂಡರೂ ಗಳಿಕೆಗಳನ್ನು ಮಾತ್ರ ಅವು ಕೈಗೂಡುವವರೆಗೆ ಪರಿಗಣಿಸದಿರುವುದು ಬ್ಯಾಂಕರನ ರೀತಿ. ಬ್ಯಾಂಕರನ ಮುಷ್ಟಿ ಬಿಗಿ ಎನ್ನಿಸಬಹುದಾದರೂ, ಅದರ ಹಿಂದಿರುವ ಅವನ ಕಠೋರ ವಾಸ್ತವಪ್ರಜ್ಞೆಗೆ ತಲೆದೂಗಬೇಕಾಗುತ್ತದೆ.

ವಿವಿಧ ಆಸ್ತಿ ಹೊಣೆಗಳ ನಿಜಸ್ವರೂಪ ಬಯಲಾದಾಗ ಆಸ್ತಿ-ಹೊಣೆ ತಃಖ್ತೆಯ ವಿವಿಧ ಬಾಬ್ತುಗಳೂ ಯಥೋಚಿತವಾಗಿ ಬದಲಾಗಬೇಕಾಗುತ್ತದೆ. ಇದಲ್ಲದೆ ಆಸ್ತಿ ಹೊಣೆಗಳನ್ನು ಪಟ್ಟಿ ಮಾಡುವಾಗಲೂ ಬ್ಯಾಂಕರ್ ತನ್ನದೇ ಆದ ಕ್ರಮ ಅನುಸರಿಸುತ್ತಾನೆ. ಸಾಮಾನ್ಯವಾಗಿ ದ್ರವತ್ವದ ಕ್ರಮ (liquidity order) ಅನುಸರಿಸಿ ಘಟಕದ ಆಸ್ತಿ/ಹೊಣೆಗಳನ್ನು ಬ್ಯಾಂಕರ್ ಪಟ್ಟಿ ಮಾಡುತ್ತಾನೆ. ಎಂದರೆ ಅಂತ್ಯಂತ ದ್ರವತ್ವವುಳ್ಳ ಆಸ್ತಿ ಹೊಣೆಗಳನ್ನು ಮೊದಲು ತೋರಿಸಿ ಅದರಡಿಯಲ್ಲಿ (ಅದೇ ಕ್ರಮದಲ್ಲಿ) ಇತರ ಆಸ್ತಿ ಹೊಣೆಗಳನ್ನು ಪಟ್ಟಿಮಾಡುತ್ತಾನೆ.

### ಹೋಲಿಕೆ

ಸಾಲ ಪಡೆದ ಘಟಕದ ಆಸ್ತಿ-ಹೊಣೆ ತಃಖ್ತೆಯನ್ನು ತನಗೆ ಬೇಕಾದ ಒಂದು ನಿರ್ದಿಷ್ಟರೂಪಕ್ಕೆ ತಂದುಕೊಳ್ಳುವುದು ಒಂದು ಘಟ್ಟವಾದರೆ ಲಾಭ-ನಷ್ಟ ಖಾತೆಯಿಂದ ವಿಕ್ರಯ, ಕಚ್ಚಾಸಾಮಗ್ರಿಯ ಬಳಕೆ, ಖರ್ಚುಗಳು, ಸವಕಳಿ ಹಾಗೂ ಲಾಭ/ನಷ್ಟ ಈ ಅಂಶಗಳನ್ನು ಬ್ಯಾಂಕರ್ ಪಟ್ಟಿಮಾಡಿ ಹಿಂದಿನ ಒಂದೆರಡು ವರ್ಷಗಳ ಸಂಬಂಧಿತ (relative) ಅಂಕಿಗಳಿಗೆ ಹೋಲಿಸಿ ನೋಡುವುದು ಇನ್ನೊಂದು ಘಟ್ಟ. ಹಾಗೆ ಹೋಲಿಕೆ ಮಾಡಿದಾಗ ಒಟ್ಟು ವಿಕ್ರಯದಲ್ಲಿ ಉತ್ಪಾದನೆಯ ವೆಚ್ಚ, ಕಚ್ಚಾಸಾಮಗ್ರಿಯ ಮೌಲ್ಯ, ಹಾಗೂ ಲಾಭ—ಇವುಗಳ ಪರಸ್ಪರ ಸಂಬಂಧದ ಒಂದು ಅಂದಾಜು ಸಿಗುತ್ತದೆ. ವೈಪರೀತ್ಯಗಳಿದ್ದರೆ ಅವುಗಳಿಗೆ ಕಾರಣಗಳನ್ನು ತಿಳಿಯಲು ಉದ್ಯಮಿಯಿಂದ ಬ್ಯಾಂಕರ್ ಸ್ಪಷ್ಟೀಕರಣ ಬಯಸುತ್ತಾನೆ. ಉದಾ: ವಿಕ್ರಯದಲ್ಲಿ ಇಳಿಕೆ ಅಥವಾ ಅತಿ ಹೆಚ್ಚಳ, ಲಾಭಪ್ರದತೆಯಲ್ಲಿನ ವೈಪರೀತ್ಯಗಳು, ಇತ್ಯಾದಿ. ಕಚ್ಚಾಸಾಮಗ್ರಿಯ ಬಳಕೆಯಲ್ಲಿ ಇಳಿಕೆಯಾಗಿರುವುದು ವಿಕ್ರಯ ಕಡಮೆಯಾಗಿರುವುದನ್ನಾಗಲಿ, ಘಟಕದ ಬಿಡಿ ಕೆಲಸ ಹೆಚ್ಚಿ ಸ್ವಂತ ಉತ್ಪಾದನೆ ಕಡಮೆಯಾಗಿರುವುದನ್ನಾಗಲಿ ಸೂಚಿಸಬಹುದು ; ಅಥವಾ ಕಚ್ಚಾಸಾಮಗ್ರಿಯ ಬಳಕೆಯಲ್ಲಿ ಮಿತವ್ಯಯ ಸಾಧಿಸಿರುವುದನ್ನು ಸೂಚಿಸಬಹುದು.

ತಾನು ನಿರ್ದಿಷ್ಟರೂಪಕ್ಕೆ ತಂದುಕೊಂಡ ಆಸ್ತಿ-ಹೊಣೆ ತಃಖ್ತೆಯನ್ನು ಹಿಂದಿನ ಒಂದೆರಡು ವರ್ಷಗಳ ತಃಖ್ತೆಗಳಿಗೆ ಹೋಲಿಸಿ ನೋಡಲು ಅನುಕೂಲವಾಗುವಂತೆ ಆ ಮೂರು ವರ್ಷಗಳ ತಃಖ್ತೆಗಳನ್ನು ಬ್ಯಾಂಕರ್ ಒಟ್ಟೊಟ್ಟಾಗಿ ಪಟ್ಟಿಮಾಡಿಕೊಳ್ಳುತ್ತಾನೆ.

### ಆಸ್ತಿ-ಹೊಣೆ ತಃಖ್ತೆಯ ವಿಶ್ಲೇಷಣೆ

ಇಷ್ಟು ಪೂರ್ವಸಿದ್ಧತೆ ನಡೆಸಿ, ಬ್ಯಾಂಕರ್ ಆಸ್ತಿ-ಹೊಣೆ ತಃಖ್ತೆಯ ವಿಶ್ಲೇಷಣೆಗೆ ತೊಡಗುತ್ತಾನೆ. ಆಸ್ತಿ-ಹೊಣೆ ತಃಖ್ತೆಯ ವಿಶ್ಲೇಷಣೆಯನ್ನು "ತಃಖ್ತೆಯ ವಿವಿಧ ಬಾಬ್ತುಗಳ ನಡುವಣ ಸಂಬಂಧಗಳನ್ನು ನಿರ್ಧರಿಸಿ ಉದ್ಯಮಘಟಕದ ಹಣಕಾಸು ಸ್ಥಿತಿಯ ಗತಿಯನ್ನು ತಿಳಿಯುವ ಒಂದು ಪ್ರಯತ್ನ" ಎನ್ನಬಹುದು.

ವಿವಿಧ ಬಾಬ್ತುಗಳ ನಡುವಣ ಅನುಪಾತಗಳನ್ನು ಲೆಕ್ಕಮಾಡಿ ಬ್ಯಾಂಕರ್ ಉದ್ಯಮದ ಹಣಕಾಸು ಸ್ಥಿತಿಯ ಬಗೆಗೆ ಹೇಗೆ ತರ್ಕಿಸುತ್ತಾನೆಂಬುದನ್ನು ತಿಳಿಸುವ ಪ್ರಯತ್ನವನ್ನು ಈ ಮುಂದೆ ಮಾಡಲಾಗಿದೆ.

#### 1 ಚಾಲ್ತಿ ಆಸ್ತಿಗಳು : ಚಾಲ್ತಿ ಹೊಣೆಗಳು (ಚಾಲ್ತಿ ಅನುಪಾತ)

ಒಂದು ಕಿರು ಅವಧಿಯೊಳಗಾಗಿ ಘಟಕ ಪಾವತಿ ಮಾಡಬೇಕಾದ ಸಾಲಗಳನ್ನು/ಹೊಣೆಗಳನ್ನು ಚಾಲ್ತಿ ಹೊಣೆಗಳೆನ್ನುವರು. ಅದೇ ರೀತಿ ಒಂದು ಕಿರು ಅವಧಿಯೊಳಗಾಗಿ ನಗದಿಗೆ ಪರಿವರ್ತಿಸಿಕೊಳ್ಳಲು ಸಾಧ್ಯವಿರುವ, ಮಾರಾಟಕ್ಕಾಗಿಯೇ ಇರುವ ಆಸ್ತಿಗಳನ್ನು ಚಾಲ್ತಿ ಆಸ್ತಿಯೆನ್ನುವರು. (ಇಲ್ಲಿ ಕಿರು ಅವಧಿ ಎಂದರೆ ಸಾಮಾನ್ಯವಾಗಿ 12 ತಿಂಗಳು) ಘಟಕವೊಂದರಲ್ಲಿ ಚಾಲ್ತಿ ಹೊಣೆಗಳಿಗೆ ಹೋಲಿಸಿದಂತೆ ಚಾಲ್ತಿ ಆಸ್ತಿಗಳು ಎಷ್ಟಿವೆಯೆಂಬುದನ್ನು ಚಾಲ್ತಿ ಅನುಪಾತ ಸೂಚಿಸುತ್ತದೆ. ಚಾಲ್ತಿ ಅನುಪಾತ 1.5 : 1 ಇದ್ದರೆ ಘಟಕದ ದ್ರವತ್ವ ಸ್ಥಿತಿ ಉತ್ತಮವಾಗಿದೆ ಎನ್ನಲು ಅಡ್ಡಿಯಿಲ್ಲ. ಚಾಲ್ತಿ ಆಸ್ತಿಗಳಲ್ಲಿ ಚಾಲ್ತಿ ಹೊಣೆಗಳನ್ನು ಕಳೆದನಂತರ ಬರುವ ಮೊಬಲಗನ್ನು 'ದ್ರವತ್ವ ಹೆಚ್ಚುವರಿ' ಎನ್ನುತ್ತೇವೆ.* ಚಾಲ್ತಿ ಅನುಪಾತ 1:1 ಕ್ಕಿಂತ ಕಡಮೆಯಿದ್ದರೆ (ಚಾಲ್ತಿ ಹೊಣೆಗಳು ಚಾಲ್ತಿ ಆಸ್ತಿಗಳಿಗಿಂತ ಹೆಚ್ಚಾಗಿದ್ದರೆ) ದ್ರವತ್ವದ ಕೊರತೆಯಿದೆಯೆಂದರ್ಥ. ಈ ಕೊರತೆಯನ್ನು ತುಂಬಲು ಉದ್ಯಮಿ ಸ್ವಂತ ಬಂಡವಾಳವನ್ನು ಹೆಚ್ಚಿಸುವಂತೆ ಸಲಹೆ ಮಾಡಬೇಕಾಗಬಹುದು ; ಬ್ಯಾಂಕ್ ಸಾಲವನ್ನು ಹೆಚ್ಚಿಸಲು ಅವಕಾಶವಿದ್ದರೆ ಹಾಗೆ ಮಾಡಬಹುದು ; ಅಥವಾ ದೀರ್ಘಕಾಲಿಕ ಆಸ್ತಿಗಳನ್ನು ವಿಲೆ ಮಾಡಿ ಕಚ್ಚಾಸಾಮಗ್ರಿ ಮುಂತಾದ ಚಾಲ್ತಿ ಆಸ್ತಿಗಳನ್ನು ಕೊಳ್ಳುವಂತೆ ಘಟಕಕ್ಕೆ ಸಲಹೆ ಮಾಡಬೇಕಾಗಬಹುದು.

ಚಾಲ್ತಿ ಅನುಪಾತ ಅತಿ ಹೆಚ್ಚಾಗಿದ್ದರೂ ತೊಂದರೆಯೇ ! ಉದಾ : ಚಾಲ್ತಿ ಅನುಪಾತ 3:1 ಇದ್ದರೆ (ಎಂದರೆ ಚಾಲ್ತಿ ಆಸ್ತಿಗಳು ಚಾಲ್ತಿ ಹೊಣೆಗಳ ಮೂರರಷ್ಟಿದ್ದರೆ) ಘಟಕ ತನ್ನ ಹಣವನ್ನು ಮಿತವಾಗಿ ಬಳಸಿಲ್ಲವೆಂದು ತಿಳಿಯಬಹುದು. ಇಂಥ ಕಡೆಗಳಲ್ಲಿ ಅಗತ್ಯಕ್ಕಿಂತ ಹೆಚ್ಚೆನಿಸುವ ದ್ರವತ್ವ ಹೆಚ್ಚುವರಿಯನ್ನು ವಿನಿಯೋಜನೆಗೆ ಅಥವಾ ಸ್ಥಿರಾಸ್ತಿಗಳಿಗೆ ಪರಿವರ್ತಿಸಿಕೊಳ್ಳುವಂತೆ ಸಲಹೆ ಮಾಡಬಹುದು.

ಈ ಅನುಪಾತದಿಂದ ಘಟಕದ ದ್ರವತ್ವ ಗುಣ ತಿಳಿದುಬರುವುದರಿಂದ ಇದು ದ್ರವತ್ವ ಅನುಪಾತ. ಶೀಘ್ರ ಅನುಪಾತ ಅಥವಾ ಆಮ್ಲ ಪರೀಕ್ಷಾನುಪಾತವೂ ದ್ರವತ್ವ ಅನುಪಾತದಂಥದೇ. ಶೀಘ್ರವಾಗಿ ನಗದಿಗೆ ಪರಿವರ್ತಿಸಿಕೊಳ್ಳಬಹುದಾದಂಥ ನಗದು, ಸರಕಿನ ದಾಸ್ತಾನು ಹಾಗೂ ವ್ಯವಹಾರ ಋಣಗಳನ್ನು ಶೀಘ್ರ ಆಸ್ತಿಗಳು ಎನ್ನಲಾಗಿದ್ದು, ಶೀಘ್ರ ಆಸ್ತಿಗಳು ÷ ಚಾಲ್ತಿ ಹೊಣೆಗಳು = ಶೀಘ್ರ ಅನುಪಾತ.

### ಸ್ವಂತ ಬಂಡವಾಳ : ದೀರ್ಘಕಾಲಿಕ ಹೊಣೆಗಳು

Equity-longterm liabilities solvency ratio. ಉದ್ಯಮದ ಒಡೆಯರು ವಿನಿಯೋಜಿಸಿದ ಹಣಕ್ಕೆ ಅವರು ಉದ್ಯಮದಲ್ಲಿ ಉಳಿಸಿಕೊಂಡಿರಲು ಬಿಟ್ಟಿರುವ ಲಾಭಗಳನ್ನು ಹಾಗೂ ಮೊಸಲುಗಳನ್ನು ಸೇರಿಸಿದರೆ ಬರುವ ಮೊತ್ತವೇ ಉದ್ಯಮಿಯ ಸ್ವಂತ ಬಂಡವಾಳ.

ಅಡಮಾನ ಸಾಲಗಳು, ಡಿಬೆಂಚರ್ ನೀಡಿಕೆಗಳು ಹಾಗೂ ಅವಧಿ ಸಾಲಗಳು—12 ತಿಂಗಳ ಅನಂತರ ಪಾವತಿ ಮಾಡಬೇಕಾದ ಸಾಲಗಳು)—ಇವುಗಳ ಒಟ್ಟು ಮೊತ್ತವೇ ದೀರ್ಘಕಾಲಿಕ ಹೊಣೆ.

ಇವೆರಡನ್ನೂ ಹೋಲಿಸಿದಾಗ ಬರುವ ಅನುಪಾತವೇ ಸ್ವಂತ ಬಂಡವಾಳ/ದೀರ್ಘಕಾಲಿಕ ಹೊಣೆ ಅನುಪಾತ. ಘಟಕದ ಸಾಲಿಗರಿಗೆ ಅವರು ನೀಡಿದ ಮೊಬಲಗುಗಳ ಮೇಲೆ ಯಾವ ಮಟ್ಟಿನ ರಕ್ಷಣೆ ದೊರೆಯುವುದೆಂಬುದನ್ನು ಈ ಅನುಪಾತ ಸೂಚಿಸುತ್ತದೆ. ಇದನ್ನು ಶೋಧನಸಾಮರ್ಥ್ಯ (solvency) ಅನುಪಾತ ಎನ್ನುವುದು ಇದಕ್ಕೇ. ಈ ಅನುಪಾತ 2:1 ಇದ್ದರೆ ಉತ್ತಮ ; ಇನ್ನೂ ಹೆಚ್ಚಾದರೆ ಸಾಲಿಗರು ಅಭದ್ರ.

ಈ ಅನುಪಾತಕ್ಕೆ ಬ್ಯಾಂಕರನಿಂದ ಒಂದು ಸಣ್ಣ ಮಾರ್ಪಾಡು, ದೀರ್ಘಕಾಲಿಕ ಹೊಣೆಗೆ ಬದಲು ಬಂಡವಾಳೇತರ ಹೊಣೆ ಇರಲಿ, ಕಾರಣ ಸ್ಪಷ್ಟ—ಬ್ಯಾಂಕರ್ ನೀಡಿರುವ ನಗದುದರಿ, ಮುಂಗಡ ಮುಂತಾದವು ಘಟಕದ ದೀರ್ಘಾವಧಿ ಹೊಣೆಗಳಲ್ಲ. ಬ್ಯಾಂಕರ್ ತನಗೆ ದೊರೆಯುವ ರಕ್ಷಣೆಯನ್ನು ಕುರಿತು ಚಿಂತಿಸಬೇಕಷ್ಟೆ ?

---

* ದ್ರವತ್ವ ಹೆಚ್ಚುವರಿಯನ್ನು ಚಾಲ್ತಿ ಹೊಣೆಗಳ ಶೇಕಡಾ ಆಗಿ ತೋರಿಸಿ ಘಟಕದ ದ್ರವತ್ವವನ್ನು ಅಳೆಯಬಹುದು.

ಸ್ವಂತ ಬಂಡವಾಳ ಬಂಡವಾಳೇತರ ಹೊಣೆ ಅನುಪಾತ 1:6 ಅಥವಾ ಹೆಚ್ಚು ಇದ್ದರೆ ಕ್ಷೇಮ. ಕಡಮೆಯಾದರೆ ಎಚ್ಚರಿಕೆ ಅಗತ್ಯ.

### ಕೆಲವು ಇತರ ಅನುಪಾತಗಳು

ದ್ರವತ್ವ ಅನುಪಾತ ಹಾಗೂ ಸ್ವಂತ ಬಂಡವಾಳ/ದೀರ್ಘಕಾಲಿಕ ಹೊಣೆಗಳು–ಇವೆರಡೂ ಆಸ್ತಿ–ಹೊಣೆ ತಃಖ್ತೆ ಅನುಪಾತಗಳು. ಇಲ್ಲಿ ಹೋಲಿಸಲಾಗಿರುವ ಎರಡು ಬಾಬ್ತುಗಳೂ ಆಸ್ತಿ-ಹೊಣೆ ತಃಖ್ತೆಯಿಂದ ತೆಗೆದುಕೊಂಡವು.

ವ್ಯಾಪಾರ ಮತ್ತು ಲಾಭ-ನಷ್ಟ ಖಾತೆಯಿಂದ ಕೆಲವು ಬಾಬ್ತುಗಳನ್ನು ಆಯ್ದು ಪರಸ್ಪರ ಹೋಲಿಸುವುದುಂಟು. (1) ನಿವ್ವಳ ಲಾಭವನ್ನು ಒಟ್ಟು ವಿಕ್ರಯಕ್ಕೆ ಅಥವಾ ತೊಡಗಿಸಲಾದ ಒಟ್ಟು ಹಣಕ್ಕೆ ಅಥವಾ ಬಂಡವಾಳಕ್ಕೆ, (2) ಸ್ವಂತ ಬಂಡವಾಳವನ್ನು ವಿಕ್ರಯಕ್ಕೆ, (3) ಅಂತಿಮ ದಾಸ್ತಾನನ್ನು ಒಟ್ಟು ವಿಕ್ರಯಕ್ಕೆ, (4) ವ್ಯವಹಾರ ಧನಿಗಳನ್ನು ಒಟ್ಟು ಖರೀದಿಗೆ ಹಾಗೂ (5) ವ್ಯವಹಾರ ಋಣಿಗಳನ್ನು ಒಟ್ಟು ವಿಕ್ರಯಕ್ಕೆ ಹೋಲಿಸಿ ವಿವಿಧ ಅನುಪಾತಗಳನ್ನು ಬ್ಯಾಂಕರ್ ಕಂಡುಹಿಡಿಯುತ್ತಾನೆ. ಈ ಅನುಪಾತಗಳೂ ಮುಖ್ಯವಾದರೂ ಸಾಮಾನ್ಯವಾಗಿ ಆಸ್ತಿ-ಹೊಣೆ ತಃಖ್ತೆ ಅನುಪಾತಗಳೆಂದು ಇವನ್ನು ಪರಿಗಣಿಸಲಾಗಿಲ್ಲ.

(1) ನಿವ್ವಳ ಲಾಭವನ್ನು ಬಂಡವಾಳಕ್ಕೆ/ಒಟ್ಟು ವಿಕ್ರಯಕ್ಕೆ/ತೊಡಗಿಸಲಾದ ಒಟ್ಟು ಹಣಕ್ಕೆ ಹೋಲಿಸುವುದರ ಉದ್ದೇಶ ಉದ್ಯಮದ ಲಾಭಪ್ರದತೆಯನ್ನು ಅಳೆಯುವುದು. ತೊಡಗಿಸಿದ ಹಣಕ್ಕೆ ಸಮಂಜಸವಾದ ಪ್ರತಿಫಲವಿರಬೇಕು. ಇದೇ ರೀತಿ ವಿಕ್ರಯದಲ್ಲಿ ನಿವ್ವಳ ಲಾಭದ ಪ್ರಮಾಣ ತಕ್ಕಷ್ಟಿರಬೇಕು ಎಂಬುದನ್ನು ಒಪ್ಪಬಹುದು. (2) ಒಟ್ಟು ವಿಕ್ರಯ ಭಾರಿ ಮೊತ್ತದ್ದಾಗಿರುವಾಗ ಉದ್ಯಮಿಯ ಸ್ವಂತ ಬಂಡವಾಳವೂ ಅದಕ್ಕೆ ಅನುಗುಣವಾಗಿರಬೇಕು. ತಕ್ಕಷ್ಟು ಸ್ವಂತ ಬಂಡವಾಳವಿಲ್ಲದೆ ಭಾರಿ ವ್ಯವಹಾರ ನಡೆಸುವುದನ್ನು ಬ್ಯಾಂಕರ್ ಸಮರ್ಥಿಸಲಾರ. (3) ಅಂತಿಮ ದಾಸ್ತಾನಿನ ಮೌಲ್ಯವನ್ನು ಒಟ್ಟು ವಿಕ್ರಯಕ್ಕೆ ಹೋಲಿಸುವುದರ ಉದ್ದೇಶ ದಾಸ್ತಾನಿನ ಮಟ್ಟವನ್ನು ಅಂದಾಜು ಮಾಡುವುದು. ಹೀಗೆ ಹೋಲಿಕೆಗಳು ಅರ್ಥಪೂರ್ಣವಾಗಿದ್ದು ಘಟಕದ ವ್ಯವಹಾರದ ಗತಿಯ ವಿವಿಧ ಮುಖಗಳನ್ನು ಬ್ಯಾಂಕರನಿಗೆ ಪರಿಚಯ ಮಾಡಿಕೊಡುತ್ತವೆ.

**ನಿಧಿ ಹರಿವು ತಃಖ್ತೆ (Funds Flow Statement)** ಹೀಗೆ ಆಸ್ತಿ-ಹೊಣೆ ತಃಖ್ತೆಗಳ ಅಧ್ಯಯನ ಸ್ವಾರಸ್ಯಪೂರ್ಣ, ಉಪಯುಕ್ತ, ಅಧ್ಯಯನ ಆಳವಾದಂತೆ ಉಪಯುಕ್ತತೆಯೂ ಅಧಿಕ. ಉದಾಹರಣೆ: ಕಮ್ಮಟದ ಕಿಡಿಗಳ ಉತ್ಪಾದನೆಯಲ್ಲಿ ತೊಡಗಿರುವ ಸಮನ್ವಯ ಉತ್ಪನ್ನಗಳು ಎಂಬ ಉದ್ಯಮ ಘಟಕವೊಂದು 1.1.1985ರಂದು ತನಗೆ ಸೇರಿದ ಕಿಡಿಗಳ ಕುಂಡ ಎಂಬ ಯಂತ್ರವೊಂದನ್ನು ಅದರ ಪುಸ್ತಕ ಮೌಲ್ಯವಾದ ರೂ. 40,000/– ನಗದಿಗೆ ಮಾರಿತು ಎಂದಿಟ್ಟುಕೊಳ್ಳೋಣ. ಆ ದಿನ ಸಂಸ್ಥೆಯಲ್ಲಿ ಬೇರಾವ ವಹಿವಾಟೂ ನಡೆಯಲಿಲ್ಲ ಎಂದೂ ಭಾವಿಸೋಣ. 31.12.84 ಮತ್ತು 1.1.85ರಲ್ಲಿದ್ದಂತೆ ಘಟಕದ ಆಸ್ತಿ-ಹೊಣೆ ತಃಖ್ತೆಗಳನ್ನು ತಯಾರಿಸಿ ಹೋಲಿಸಿದಾಗ ಸ್ಥಿರಾಸ್ತಿಯಾದ ಯಂತ್ರವೊಂದು ಚರಾಸ್ತಿಯಾಗಿ ಮಾರ್ಪಟ್ಟಿದ್ದು, ಘಟಕದ ಚಾಲ್ತಿ ಆಸ್ತಿಗಳೂ ದ್ರವತ್ವವೂ ಹೆಚ್ಚಿರುವ ಅಂಶ ತಿಳಿದುಬರುತ್ತದೆ. ಹಾಗೆಯೇ. ಸ್ಥಿರಾಸ್ತಿಗಳಲ್ಲಿ ರೂ. 40.000/-ಕಡಮೆಯಾಗಿರುವ ಅಂಶವೂ ತಿಳಿದುಬರುವುದಲ್ಲದೆ ಒಟ್ಟು ಬಂಡವಾಳಕ್ಕೆ ಹೋಲಿಸಿದಂತೆ ಸ್ಥಿರಾಸ್ತಿಯ ಪ್ರಮಾಣ ಕಡಿಮೆಯಾಗಿರುವುದೂ ಗೋಚರಿಸುತ್ತದೆ.

ಎರಡು ನಿರ್ದಿಷ್ಟ ದಿನಾಂಕಗಳ ಆಸ್ತಿ-ಹೊಣೆ ತಃಖ್ತೆಗಳನ್ನು ಆಧರಿಸಿ ಆಸ್ತಿಗಳ ಮತ್ತು ಹೊಣೆಗಳ ಸಂರಚನೆಯಲ್ಲಿ ಉಂಟಾಗಿರುವ ಬದಲಾವಣೆಯನ್ನು ಗುರುತಿಸುವ ತಃಖ್ತೆಯೇ ನಿಧಿ ಹರಿವು ತಃಖ್ತೆ.

ಒಂದು ಗೊತ್ತಾದ ಅವಧಿಯಲ್ಲಿ ಉದ್ಯಮ ಉತ್ಪಾದಿಸಿದ (generated) ನಿಧಿಯನ್ನೂ ಅವುಗಳ ಮೂಲಗಳನ್ನೂ ಗುರುತಿಸುವುದು ಹಾಗೂ ಈ ನಿಧಿಗಳನ್ನು ಹೇಗೆ ಉಪಯೋಗಿಸಲಾಯಿತೆಂದು ತಿಳಿಯುವುದು ನಿಧಿ ಹರಿವು ತಃಖ್ತೆಯ ಉದ್ದೇಶ.

ನಿಧಿ ಹರಿವು ತಃಖ್ತೆಯನ್ನು ಕುರಿತ ಹೆಚ್ಚಿನ ವಿವರಗಳು ಈ ಲೇಖನದ ವ್ಯಾಪ್ತಿಯನ್ನು ಮೀರಿದ್ದು. ನಿಧಿ ಹರಿವು ತಃಖ್ತೆಗಳು ಆಸ್ತಿ-ಹೊಣೆ ತಃಖ್ತೆಗಳನ್ನು ಆಧರಿಸಿರುವುವೆಂಬುದನ್ನು ಇಲ್ಲಿ ಗಮನಿಸಿದರೆ ಸಾಕು.

### ದುಡಿಮೆ ಬಂಡವಾಳದ ನಿರ್ಧಾರಣಕ್ಕೆ ಅನುಪಾತಗಳ ಆಧಾರ

ಗೊತ್ತುಮಾಡಲಾದ ಒಂದು ಉತ್ಪಾದನೆಯ ಮಟ್ಟದಲ್ಲಿ ಘಟಕಕ್ಕೆ ಅಗತ್ಯವಾಗುವ ಸರಕಿನ ದಾಸ್ತಾನು ಹಾಗೂ ಅದರ ವ್ಯವಹಾರ ಋಣಿಗಳನ್ನು ಪ್ರಮುಖವಾಗಿ ಆಧರಿಸಿ ಆ ಘಟಕದ ದುಡಿಮೆ ಬಂಡವಾಳವನ್ನು ನಿರ್ಧರಿಸಲಾಗುತ್ತದೆಂದು ಸ್ಥೂಲವಾಗಿ ತಿಳಿಯಬಹುದು.

ಉದ್ಯಮ ಘಟಕದ ಇತ್ತೀಚಿನ ಆಸ್ತಿ-ಹೊಣೆ ತಃಖ್ತೆಯಂತೆ ದಾಸ್ತಾನು/ಮಾರಾಟ ಹಾಗೂ ವ್ಯವಹಾರ ಋಣಿಗಳು/ಮಾರಾಟ ಅನುಪಾತಗಳನ್ನು ಲೆಕ್ಕಿಸಿದರೆ ಘಟಕ ಇಂತಿಷ್ಟು ತಿಂಗಳ ಸರಕು ಮತ್ತು ಇಂತಿಷ್ಟು ತಿಂಗಳ ವ್ಯವಹಾರ ಋಣಿಗಳನ್ನು ಹೊಂದಿರುವುದೆಂಬುದರ ಅಂದಾಜು ದೊರೆಯುತ್ತದೆ. ಇವುಗಳ ಆಧಾರದ ಮೇಲೆ ಘಟಕಕ್ಕೆ ಅಗತ್ಯವಾದ ದುಡಿಮೆ ಬಂಡವಾಳದ ಮಿತಿಗಳನ್ನೂ, ಅಗತ್ಯವಾದ ಮಿತಿಗಳಲ್ಲಿ ಸಾಲಗಾರನ ಭಾಗಾಂಶ ಕಳೆದು ಬ್ಯಾಂಕರ್ ತಾನು ನೀಡಲು ಒಪ್ಪಬಹುದಾದ ಮಿತಿಗಳನ್ನೂ ಲೆಕ್ಕಹಾಕುತ್ತಾನೆ.

ಹಾಗೆಯೇ ಆಸ್ತಿ-ಹೊಣೆ ತಃಖ್ತೆಯಲ್ಲಿದ್ದಂತೆ ವ್ಯವಹಾರ ಋಣಿ/ವಿಕ್ರಯ ಅನುಪಾತದಿಂದ ಘಟಕಕ್ಕೆ ವ್ಯವಹಾರ ಧನಿಗಳ ಮೂಲಕ ಒದಗಿಬರುವ ಉದರಿಯ ಅಂದಾಜು ದೊರೆಯುತ್ತದೆ. ಇದರ ಜತೆಗೆ ಆಸ್ತಿ-ಹೊಣೆ ತಃಖ್ತೆಯಂತೆ ಲಭ್ಯವಾಗುವ ದ್ರವತ್ವ ಹೆಚ್ಚುವರಿಯನ್ನೂ ಉದ್ಯಮಿ ಒದಗಿಸಲು ಒಪ್ಪುವ ಇತರ ಹಣ ಮೂಲಗಳನ್ನೂ ಗಮನಿಸಿ ಒದಗಿಬರುವ ಒಟ್ಟು ನೆರವನ್ನು ದೃಷ್ಟಿಯಲ್ಲಿಟ್ಟುಕೊಂಡು ಸಮಂಜಸವಾದ ಒಂದು ದುಡಿಮೆ ಬಂಡವಾಳ ಮಿತಿಯನ್ನು ಬ್ಯಾಂಕರ್ ಘಟಕಕ್ಕೆ ಮಂಜೂರು ಮಾಡುತ್ತಾನೆ.

### ಕೆಲವು ಸಮಸ್ಯೆಗಳು

ಆಸ್ತಿ-ಹೊಣೆ ತಃಖ್ತೆಗಳ ಅಧ್ಯಯನದಿಂದ ಮತ್ತು ಅನುಪಾತ ವಿಶ್ಲೇಷಣೆಯಿಂದ ದುಡಿಮೆ ಬಂಡವಾಳದ ನಿರ್ಧಾರಣವನ್ನು ಅರ್ಥಪೂರ್ಣವಾಗಿಸಲು ಸಾಧ್ಯವೆಂದು ತಿಳಿದುದಾಯಿತು. ಆಸ್ತಿ-ಹೊಣೆ ತಃಖ್ತೆಗಳ ಪರಿಶೀಲನೆಯಿಂದ ಲಭಿಸುವ ಇತರ ಪ್ರಯೋಜನಗಳನ್ನು

ಉದಾಹರಣೆ : ಸಮನ್ವಯ ಉತ್ಪನ್ನಗಳು (1984-85ರ ಸಾಲಿಗೆ)

**ದುಡಿಮೆ ಬಂಡವಾಳದ ನಿರ್ಧಾರಣ**

ಆಧಾರ : ತಿಂಗಳ ಮಾರಾಟ ರೂ. 1,00,000/-
ಇದರಲ್ಲಿ ಉತ್ಪಾದನೆಯ ವೆಚ್ಚ ರೂ. 80,000/-
ಇದರಲ್ಲಿ ಕಚ್ಚಾಸಾಮಗ್ರಿಯ ವೆಚ್ಚ ರೂ. 60,000/-

| [ಅನುಪಾತಗಳನ್ನಾಧರಿಸಿ] | | | ಬ್ಯಾಂಕರ್ ಕೊಡಲು ಒಪ್ಪುವ ಮಿತಿಗಳು ರೂ. | ದುಡಿಮೆ ಬಂಡವಾಳದ ಅಗತ್ಯ ರೂ. |
|---|---|---|---|---|
| ಕಚ್ಚಾಸಾಮಗ್ರಿ 2 ತಿಂಗಳದು | 1,20,000 | | | |
| ಕಳೆತ : ಭಾಗಾಂಶ (25%) | 30,000 | | 90,000 | 1,20,000 |
| ಪ್ರಕ್ರಿಯೆ ಸರಕು/ಸಿದ್ಧ ಸರಕು 6 ತಿಂಗಳದು | | 80,000 | | |
| ಕಳೆತ : ಭಾಗಾಂಶ (25%) | | 20,000 | 60,000 | 80,000 |
| ವ್ಯವಹಾರ ಋಣಿಗಳು 2 ತಿಂಗಳು [ಮಾರಾಟದಂತೆ] | | 2,00,000 | | ಉತ್ಪಾದನ ವೆಚ್ಚದಂತೆ |
| ಕಳೆತ : ಭಾಗಾಂಶ (25%) | | 50,000 | 1,50,000 | 1,60,000 |
| 1 ತಿಂಗಳ ಖರ್ಚು | | | — | 20,000 |
| | | | 3,00,000 | 3,80,000 |

ಈ ಮೊದಲೇ ಹೇಳಲಾಗಿದೆ. ಆದರೆ ಈ ಪ್ರಯೋಜನಗಳನ್ನು ಪೂರ್ಣವಾಗಿ ಪಡೆಯಲು ಬ್ಯಾಂಕರರಿಗೆ ಆಗುತ್ತಿಲ್ಲ. ಆಸ್ತಿ-ಹೊಣೆ ತಃಖ್ತೆಯ ಅಧ್ಯಯನ ಕುರಿತಂತೆ ಕೆಲವು ಸಮಸ್ಯೆಗಳು ಉದ್ಭವಿಸುತ್ತವೆ. ಅವುಗಳಲ್ಲಿ ಕೆಲವನ್ನು ನೋಡಬಹುದು :

(1) ಘಟಕಗಳು ಸಕಾಲದಲ್ಲಿ ಆಸ್ತಿ-ಹೊಣೆ ತಃಖ್ತೆಗಳನ್ನು ಸಲ್ಲಿಸುವುದಿಲ್ಲ. ಅನಿಷ್ಟಕರ ಲಕ್ಷಣಗಳನ್ನು ಹೊಂದಿರುವ ಘಟಕಗಳಂತೂ ಒಂದೆರಡು ವರ್ಷಗಳೇ ಸಂದರೂ ತಃಖ್ತೆಗಳನ್ನು ಸಲ್ಲಿಸುವುದೇ ಇಲ್ಲ.

(2) ಎಲ್ಲ ಘಟಕಗಳ ಆಸ್ತಿ-ಹೊಣೆ ತಃಖ್ತೆಗಳನ್ನು ಕೂಲಂಕಷವಾಗಿ ಅಧ್ಯಯಿಸಿ ಸವಿವರವಾಗಿ ವಿಶ್ಲೇಷಿಸಲು ಉದರಿ ಉಸ್ತುವಾರಿ ಮಾಡುವ ಅಧಿಕಾರಿಗಳಿಗೆ (ಕ್ಷೇತ್ರಾಧಿಕಾರಿಗಳಿಗೆ) ಸಮಯವಿರುವುದಿಲ್ಲ, ಅದರಿಂದಲೇ ತಃಖ್ತೆಗಳ ಅಧ್ಯಯನ ಸಮರ್ಪಕವಾಗುವುದಿಲ್ಲ ಎಂಬುದು ಅಧಿಕಾರಿಗಳ ದೂರು. ಹಲವು ಶಾಖೆಗಳಲ್ಲಿ ಕ್ಷೇತ್ರಾಧಿಕಾರಿಗೆ ಕೆಲಸದ ಒತ್ತಡ ಮಿತಿಮೀರಿರುತ್ತದೆ.

(3) ಉದರಿ ಉಸ್ತುವಾರಿ ಮಾಡುವ ಬ್ಯಾಂಕ್ ಅಧಿಕಾರಿಗಳಲ್ಲಿ ಬಹುಮಂದಿಗೆ ಆಸ್ತಿ ಹೊಣೆಗಳನ್ನು ಅಧ್ಯಯಿಸುವ, ಅನುಪಾತಗಳನ್ನು ವಿಶ್ಲೇಷಿಸುವ ಕೌಶಲ ಕರಗತವಾಗಿರುವುದಿಲ್ಲ.

(4) ಅರೆ ಪಟ್ಟಣ ಪ್ರದೇಶದ ಶಾಖೆಗಳ ಮತ್ತು ಸಣ್ಣ ಶಾಖೆಗಳ ಅಧಿಕಾರಿಗಳಿಗೆ ತಕ್ಕಷ್ಟು ಮಾರ್ಗದರ್ಶನ ಸಾಮಾನ್ಯವಾಗಿ ಸಿಕ್ಕುವುದಿಲ್ಲ.

ಈ ಸಮಸ್ಯೆಗಳ ತೀವ್ರತೆಯನ್ನು ಗಮನಿಸಿದಾಗ ಪರಿಸ್ಥಿತಿ ಅಷ್ಟೇನೂ ಸಮಾಧಾನಕರವಾಗಿಲ್ಲ ಎಂದು ಯಾರಿಗಾದರೂ ಮನವರಿಕೆಯಾಗುತ್ತದೆ. ಆಸ್ತಿ-ಹೊಣೆ ತಃಖ್ತೆಯಲ್ಲಿ ನಮೂದಿಸಲಾದ ಆಸ್ತಿ ಅಥವಾ ಹೊಣೆಗಳ ಪುಸ್ತಕ ಮೌಲ್ಯಗಳು ಕೇವಲ ಅಂಕಿಗಳಲ್ಲ. ಅವುಗಳಿಗೆ ಒಂದು ನಿರ್ದಿಷ್ಟವಾದ ಅರ್ಥ ಇರಬೇಕಾಗುತ್ತದೆ. ಹಾಗಿಲ್ಲದಿದ್ದರೆ ನಿರ್ಜೀವವಾದ ಅಂಕಿ-ಅಂಶಗಳನ್ನೇ ಆಧರಿಸಿ ಬ್ಯಾಂಕರ್ ಕೈಗೊಂಡ ನಿರ್ಣಯಗಳು ಅವನನ್ನು ತಪ್ಪುದಾರಿಗೆಳೆಯುತ್ತವೆ. ಬ್ಯಾಂಕ್ ಸಾಲದ ಗುಣಮಟ್ಟ ಇಳಿದು, ಇಂಥ ಸಾಲಗಳ ಬಾಕಿಗಳು ಬ್ಯಾಂಕಿನ ಆಸ್ತಿ-ಹೊಣೆ ತಃಖ್ತೆಯಲ್ಲಿ ಮರುಪಾವತಿಯಾಗಿ ಬ್ಯಾಂಕಿಗೆ ಸಲ್ಲಬೇಕಾದ ಹಣವನ್ನು ಪ್ರತಿನಿಧಿಸುವ ಬದಲು ಅರ್ಥವಿಲ್ಲದ ಅಂಕಿಗಳಾಗಿ ಮಾರ್ಪಡುತ್ತವೆ. ಆದ್ದರಿಂದ ಬ್ಯಾಂಕ್ ಅಧಿಕಾರಿಗಳು ಎಚ್ಚೆತ್ತು ಆಸ್ತಿ-ಹೊಣೆ ತಃಖ್ತೆಗಳ ಪ್ರಾಮುಖ್ಯವನ್ನು ಮನಗಾಣಬೇಕಾಗಿದೆ.

**ಸಲಹೆಗಳು**

ಆಸ್ತಿ-ಹೊಣೆ ತಃಖ್ತೆಗಳ ಅಧ್ಯಯನಕ್ಕೆ ಸಂಬಂಧಿಸಿದಂತೆ ಬ್ಯಾಂಕರನ ಸಮಸ್ಯೆಗಳನ್ನು ನಿವಾರಿಸಲು ಈ ಮುಂದಿನ ಸಲಹೆಗಳನ್ನು ಪರಿಶೀಲಿಸಬಹುದು.

(1) ಬ್ಯಾಂಕಿನಿಂದ ಸಾಲ ಪಡೆದ ಘಟಕಗಳು ಪ್ರತಿವರ್ಷವೂ ತಮ್ಮ ಆಸ್ತಿ-ಹೊಣೆ ತಃಖ್ತೆಗಳನ್ನು ಹಣಕಾಸು ವರ್ಷಾಂತ್ಯದಿಂದ 6 ತಿಂಗಳ ಅವಧಿಯೊಳಗಾಗಿ ಬ್ಯಾಂಕರನಿಗೆ ಸಲ್ಲಿಸಬೇಕು ಎಂಬುದು ಸಾಲಿಗ ಬ್ಯಾಂಕರನ ಷರತ್ತುಗಳಲ್ಲಿ ಒಂದು. ಆದ್ದರಿಂದ ತಃಖ್ತೆಗಳು ಬಾರದಿದ್ದಲ್ಲಿ ಬ್ಯಾಂಕರ್ ಯುಕ್ತ ಕ್ರಮ ಕೈಗೊಳ್ಳಬೇಕು. ಉದಾ : ಎಚ್ಚರಿಕೆ ಪತ್ರ ಕಳಿಸುವುದು, ದಂಡ ಬಡ್ಡಿ ವಿಧಿಸುವುದು, ಘಟಕದ ಚೆಕ್ಕುಗಳನ್ನು ಪಾವತಿ ಮಾಡದೆ ಹಿಂದಿರುಗಿಸುವುದು, ಸಾಲವನ್ನು ಮರುಪಾವತಿ ಮಾಡುವಂತೆ ಕರೆ ನೀಡುವೆವೆಂಬ ಬೆದರಿಕೆ ಹಾಕುವುದು, ಇತ್ಯಾದಿ. ಹೀಗೆ ಮಾಡಿದರೆ ಆಸ್ತಿ-ಹೊಣೆ ತಃಖ್ತೆಗಳನ್ನು ಪಡೆಯುವುದು ಕಷ್ಟವಾಗುವುದಿಲ್ಲ.

(2) ಬ್ಯಾಂಕಿನ ಅಧಿಕಾರಿಗಳಲ್ಲಿ ಹಲವರು ಆಸ್ತಿ-ಹೊಣೆ ತಃಖ್ತೆಯ ಪ್ರಾಮುಖ್ಯವನ್ನು ಮನಗಾಣದಿರುವುದರಿಂದ ಅದಕ್ಕೆ ಸಲ್ಲಬೇಕಾದ ಆದ್ಯತೆ ಸಂದಿಲ್ಲ. ಆದ್ದರಿಂದ ಸಮಯವಿಲ್ಲವೆನ್ನುವ ಅಧಿಕಾರಿಗಳಿಗೆ ವಿಷಯದ ಮಹತ್ವವನ್ನು ಮನದಟ್ಟು ಮಾಡಿಕೊಡಬೇಕಾಗುತ್ತದೆ.

(3) ಆಸ್ತಿ-ಹೊಣೆ ತಃಖ್ತೆಗಳ ಅಧ್ಯಯನವನ್ನು ಕುರಿತು (ಉದರಿ ಉಸ್ತುವಾರಿ ಮಾಡುವ) ಕ್ಷೇತ್ರಾಧಿಕಾರಿಗಳಿಗೆ ವ್ಯವಸ್ಥಿತವಾಗಿ ತರಬೇತಿ ನೀಡಲು ತಕ್ಕ ಕ್ರಮಗಳನ್ನು ಬ್ಯಾಂಕುಗಳು ಕೈಗೊಳ್ಳಬೇಕು. ಈ ವಿಷಯದಲ್ಲಿ ನಮ್ಮ ಬ್ಯಾಂಕುಗಳ ತರಬೇತಿ

ವ್ಯವಸ್ಥೆ ಅತ್ಯಂತ ಅಸಮರ್ಪಕವಾಗಿದೆ ಎಂದು ಮನನೊಂದು ಹೇಳಬೇಕಾಗಿದೆ.

(4) ಕೇವಲ ಪರಿಪತ್ರಗಳನ್ನು ಕಳಿಸಿ—ಅವುಗಳನ್ನು ಕ್ರೋಡೀಕರಿಸುವ ಗೋಜಿಗೂ ಹೋಗದೆ—ತಮ್ಮ ಕೆಲಸ ಮುಗಿಯಿತೆಂದು ಆಡಳಿತ ಕಛೇರಿ ಅಧಿಕಾರಿಗಳು ಭಾವಿಸದೆ, ಶಾಖೆಗಳಲ್ಲಿ ಕಾರ್ಯ ನಿರ್ವಹಿಸುವ ಅಧಿಕಾರಿಗಳ ಸಮಸ್ಯೆಯನ್ನು ವಾಸ್ತವ ದೃಷ್ಟಿಯಿಂದ ನೋಡಬೇಕು. ಹೆಚ್ಚಿನ ಸಿಬ್ಬಂದಿ ಅಗತ್ಯವಾದೆಡೆಗಳಲ್ಲಿ ಅದನ್ನು ಒದಗಿಸಲು ಏರ್ಪಾಡು ಮಾಡದಿದ್ದರೆ ಉಂಟಾಗುವ ಅನಾಹುತಗಳಿಗೆ ಅಧಿಕಾರಿಗಳನ್ನು ಹೊಣೆಮಾಡುವುದು ಅನುಚಿತ. ಆಸ್ತಿ-ಹೊಣೆ ತಃಖ್ತೆಗಳ ಅಧ್ಯಯನ ವೈಜ್ಞಾನಿಕವಾಗಿ ನಡೆಯಬೇಕು. ಇಲ್ಲಿ ಕೂಲಂಕಷ ಪರಿಶೀಲನೆ ಅಗತ್ಯ. ಅನೇಕ ಒತ್ತಡಗಳ ನಡುವೆ ಮಾಡುವ ಕೆಲಸ ಇದಲ್ಲ.

### ಪರಿಸಮಾಪ್ತಿ

ತಾನು ನೀಡಿದ ಮುಂಗಡಗಳ ಭದ್ರತೆಯ ದೃಷ್ಟಿಯಿಂದ ಬ್ಯಾಂಕರನಿಗೆ ಆಸ್ತಿ-ಹೊಣೆ ತಃಖ್ತೆಗಳು ಎಷ್ಟು ಮುಖ್ಯವಾದ್ದೆಂಬುದನ್ನು ನೋಡಿದೆವು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಕೇವಲ ಆಸ್ತಿ-ಹೊಣೆ ತಃಖ್ತೆಯೊಂದನ್ನೇ ಆಧರಿಸಿ ಬ್ಯಾಂಕರ್ ನಿರ್ಧಾರಗಳನ್ನು ಕೈಗೊಳ್ಳಲು ಸಾಧ್ಯವಿಲ್ಲ. ಈ ವಿಷಯವನ್ನು ಲೇಖನದಲ್ಲಿ ಸಾಕಷ್ಟು ವಿವರವಾಗಿ ತಿಳಿಸಲು ಪ್ರಯತ್ನಿಸಲಾಗಿದೆ. ಆದಾಗಿಯೂ, ಆಸ್ತಿ-ಹೊಣೆ ತಃಖ್ತೆಗಳ ಮೇಲಿನ ಅತಿಯಾದ ಅವಲಂಬನೆ ಸಾಧುವಲ್ಲವೆಂದು ಬ್ಯಾಂಕರನನ್ನು ಎಚ್ಚರಿಸುವ ದೃಷ್ಟಿಯಿಂದ ಆಸ್ತಿ-ಹೊಣೆ ತಃಖ್ತೆಗಳ ಕೆಲವು ಇತಿಮಿತಿಗಳನ್ನು ಇಲ್ಲಿ ಸ್ಥೂಲವಾಗಿ ಗುರುತಿಸಬಹುದು :

(1) ತಃಖ್ತೆ ಒಂದು ನಿಶ್ಚಿತ ದಿನಾಂಕದಲ್ಲಿದ್ದಂತೆ ಆಸ್ತಿಗಳ/ಹೊಣೆಗಳ ಮೌಲ್ಯಗಳನ್ನು ಬಿಂಬಿಸುತ್ತದೆ. ಆಸ್ತಿ-ಹೊಣೆ ತಃಖ್ತೆಯು ಬ್ಯಾಂಕು ನಿರಂತರವಾಗಿ ಬದಲಾಗುತ್ತಿರುವ ದೃಶ್ಯಾವಳಿಯೊಂದರ ಯಾವುದೋ ಕ್ಷಣದ ಒಂದು ಸ್ಥಿರಚಿತ್ರದಂತೆ ಎನ್ನಬಹುದು. ಆಸ್ತಿಗಳೂ ಹೊಣೆಗಳೂ ಪ್ರತಿ ದಿನ ಬದಲಾಗಬಹುದಾದ್ದರಿಂದ ನಿನ್ನೆ ಇದ್ದ ಸ್ಥಿತಿ ಇಂದು ಇರಲಾರದು ಎಂಬುದನ್ನು ಬ್ಯಾಂಕರ್ ಗಮನಿಸಬೇಕು. ಹಲವು ಸ್ಥಿರಚಿತ್ರಗಳನ್ನು ಒಂದರ ಜತೆಗೊಂದು ಜೋಡಿಸಿ ಚಲನಚಿತ್ರವಾಗಿ ಮಾರ್ಪಡಿಸುವಂತೆ, ಹಲವು ಆಸ್ತಿ-ಹೊಣೆ ತಃಖ್ತೆಗಳಿಂದ ಬ್ಯಾಂಕರ್ ಒಟ್ಟು ಚಿತ್ರವನ್ನು ಕಲ್ಪಿಸಿಕೊಳ್ಳಬೇಕಾಗುತ್ತದೆ.

(2) ಆಸ್ತಿಗಳು ಅಥವಾ ಹೊಣೆಗಳಲ್ಲಿ ಬದಲಾವಣೆಯಿದ್ದರೆ ಆ ಬದಲಾವಣೆ ಯಾವಾಗ, ಹೇಗೆ ಉಂಟಾಯಿತೆಂಬುದನ್ನು ಆಸ್ತಿ-ಹೊಣೆ ತಃಖ್ತೆ ತಿಳಿಸುವುದಿಲ್ಲ.

(3) ನಮೂದಿಸಲಾದ ಬಾಬ್ತುಗಳು ಕೇವಲ ಹಣದ ಮಾನದಲ್ಲಿರುತ್ತವೆ. ಆಸ್ತಿಗಳ ಗುಣಮಟ್ಟ ತಿಳಿಯುವುದಿಲ್ಲ. ಉದಾಹರಣೆಗೆ, ಘಟಕ ಹೊಂದಿರುವ ಯಂತ್ರಸ್ಥಾವರ ಹೊಸದೇ, ಹಳೆಯದೇ ? ಅದರ ಉತ್ಪಾದನ ಸಾಮರ್ಥ್ಯ ಎಷ್ಟು ? ಇತ್ಯಾದಿಗಳನ್ನು ತಃಖ್ತೆ ತಿಳಿಸುವುದಿಲ್ಲ.*

(4) ಹಾಗೆಯೇ ಅನೇಕ ಇತರ ವಿಷಯಗಳನ್ನು ಕುರಿತಂತೆ ತಃಖ್ತೆ ಮೌನ. ಉದಾ : ಘಟಕದ ಚಟುವಟಿಕೆಗಳಲ್ಲಿ ಪಾಲುದಾರರ ಆಸಕ್ತಿ ಸಾಕಷ್ಟಿದೆಯೆ ? ವ್ಯವಸ್ಥಾಪಕ ನಿರ್ದೇಶಕನ ಆರೋಗ್ಯ ಸ್ಥಿತಿ ಹೇಗಿದೆ ? ಕಾರ್ಮಿಕರು ಮುಷ್ಕರ ಹೂಡಿದ್ದಾರೆಯೆ ? ಇಂಥ ಅಂಶಗಳು ಘಟಕದ ಉತ್ಪಾದಕತೆಯ ದೃಷ್ಟಿಯಿಂದ ಮುಖ್ಯವಾದರೂ, ಆಸ್ತಿ-ಹೊಣೆ ತಃಖ್ತೆಯಿಂದ ಇವು ತಿಳಿಯುವುದಿಲ್ಲ.

ಘಟಕದ ಪಾಲುದಾರರು/ನಿರ್ದೇಶಕರೊಡನೆ ವಿವರವಾದ ಚರ್ಚೆ, ಘಟಕದ ಆವರಣಕ್ಕೆ ಭೇಟಿ, ದಾಸ್ತಾನಿನ ಪರಿವೀಕ್ಷಣೆ, ಖಾತೆಗಳ ನಿರ್ವಹಣೆಯ ಪರಿಶೀಲನೆ—ಹೀಗೆ ವಿವಿಧ ಕ್ರಮಗಳಿಂದ ಬ್ಯಾಂಕರ್ ಈ ಕೊರತೆಗಳನ್ನು ತುಂಬಿಕೊಳ್ಳಬೇಕು.

ಹಾಗೆಯೇ ಆಸ್ತಿ-ಹೊಣೆ ತಃಖ್ತೆಯ ಅನುಪಾತಗಳ ವಿಶ್ಲೇಷಣೆ ಮಾಡುವಾಗ ಅಂಕಿಗಳ ಜಾಲದಲ್ಲಿ ಸಿಕ್ಕಿಕೊಳ್ಳದೆ ಒಂದು ಸಮಗ್ರ ದೃಷ್ಟಿಯಿಂದ ಘಟಕದ ಪ್ರಸಕ್ತ ಪರಿಸ್ಥಿತಿಯನ್ನು ಕಂಡುಕೊಳ್ಳಲು ಮಾತ್ರ ಬ್ಯಾಂಕರ್ ಅವನ್ನು ಬಳಸಿಕೊಳ್ಳಬೇಕು.

ಆಸ್ತಿ-ಹೊಣೆ ತಃಖ್ತೆಯ ಅಧ್ಯಯನ ಕೇವಲ ಒಂದು ಬೌದ್ಧಿಕ ಕಸರತ್ತಲ್ಲ. ಸಮಗ್ರವಾದ ವಾಸ್ತವದೃಷ್ಟಿಯಿಂದ ಉದ್ಯಮ ಘಟಕದ ಹಣಕಾಸು ಸ್ಥಿತಿಯನ್ನೂ ಅದರ ಗತಿಯನ್ನೂ ಅರಿಯಲು ಬ್ಯಾಂಕರನಿಗೆ ಅದೊಂದು ಸಾಧನ.

---

* ಪರವಾನಗಿ ನೀಡಿದ ಉತ್ಪಾದನ ಸಾಮರ್ಥ್ಯ, ನೈಜ ಉತ್ಪಾದನೆ, ಬಳಸಲಾದ ಕಚ್ಚಾ ಸಾಮಗ್ರಿ ಮುಂತಾದವುಗಳ ಬಗೆಗೆ ಕಂಪನಿಗಳು ತಮ್ಮ ಆಸ್ತಿ-ಹೊಣೆ ತಃಖ್ತೆಯಲ್ಲಿ ಮಾಹಿತಿ ನೀಡಬೇಕೆಂದು ಕಂಪನಿಗಳ ಅಧಿನಿಯಮದಲ್ಲಿ ವಿಧಿಸಲಾಗಿದೆ.

## ಭಾರತೀಯ ಸ್ಟೇಟ್ ಬ್ಯಾಂಕಿನ ಅಡಿಯಲ್ಲಿ ವಣಿಕ ಬ್ಯಾಂಕ್

ಭಾರತೀಯ ಸ್ಟೇಟ್ ಬ್ಯಾಂಕು ಎಸ್‌ಬಿಐ ಕ್ಯಾಪಿಟಲ್ ಮಾರ್ಕೆಟ್ಸ್ ಲಿ (ಎಸ್‌ಬಿಐಸಿಎಂಎಲ್) ಎಂಬ ಸಹಾಯಕ ಸಂಸ್ಥೆಯೊಂದನ್ನು ಸ್ಥಾಪಿಸಲಿದೆ. ವಣಿಕ ಬ್ಯಾಂಕಿಂಗಿನ ಎಲ್ಲ ಚಟುವಟಿಕೆಗಳನ್ನೂ ನಿರ್ವಹಿಸುವುದು ಇದರ ಉದ್ದೇಶ. ರೂ. 50 ಕೋಟಿ ಬಂಡವಾಳದ ಈ ಬ್ಯಾಂಕಿನ ಕೆಲವು ಮುಖ್ಯ ಕಲಾಪಗಳಿವು : 1 ಬ್ಯಾಂಕಿನ ವ್ಯಕ್ತಿಗತ ಹಾಗೂ ಸಾಂಸ್ಥಿಕ ಗ್ರಾಹಕರ ವೈವಿಧ್ಯಮಯ ಬೇಡಿಕೆಗಳ ಪೂರೈಕೆ, 2 ತಮ್ಮ ವ್ಯವಹಾರಗಳನ್ನು ಆಧುನಿಕಗೊಳಿಸಿಕೊಳ್ಳಬಯಸುವ ಸಾಂಸ್ಥಿಕ ಗ್ರಾಹಕರಿಗೆ ವಿಸ್ತೃತ ತಲದ ಹಣಕಾಸು ಸೇವೆಯ ಸಲ್ಲಿಕೆ, 3 ಗ್ರಾಹಕರ ಪರವಾಗಿ ಪ್ರತಿಭೂತಿಗಳಲ್ಲಿ ಹಣಾವಿನಿಯೋಜನೆ, ಈ ನಿಟ್ಟಿನಲ್ಲಿ ಪ್ರವೀಣ ಸಲಹೆ, 4 ಹಣಸಂಪನ್ಮೂಲದ ಎತ್ತುವಳಿ, ವೈವಿಧ್ಯೀಕರಣ, ಆಧುನಾತನ ತಂತ್ರಜ್ಞಾನ ಇತ್ಯಾದಿ ವಿಚಾರಗಳಲ್ಲಿ ದಿಗ್ದರ್ಶನ, 5 ಕಂಪನಿಗಳ ಪುನರ್ರಚನೆ, ಅಸ್ವಸ್ಥ ಕೈಗಾರಿಕೆಗಳಿಗೆ ನೆರವು.

# ತ್ರಿಭಾಷಾ ಸೂತ್ರ ಮತ್ತು ಬ್ಯಾಂಕುಗಳು

**ಹಾ. ಗು. ಬಾಲಗೋಪಾಲ್**

1985ರ ಡಿಸೆಂಬರ್ 17ರಂದು ಮೈಸೂರಿನಲ್ಲಿ ವಿಶ್ವಕನ್ನಡ ಸಮ್ಮೇಳನದ ಅಂಗವಾಗಿ ಬ್ಯಾಂಕಿಂಗ್ ಕುರಿತು ಏರ್ಪಡಿಸಿದ್ದ ವಿಚಾರಸಂಕಿರಣದಲ್ಲಿ ಮಂಡಿಸಲಾದ ಪ್ರಬಂಧಗಳಲ್ಲಿ ಒಂದು

ಭಾಷೆಯ ಆವಿಷ್ಕಾರ ಮನುಷ್ಯಜಾತಿಯ ಪ್ರಗತಿ ಮತ್ತು ಅಭಿವೃದ್ಧಿಗೆ ಒಂದು ವರದಾನ. ಭಾರತ ಹಲವು ಜಾತಿಗಳ, ಹಲವು ಧರ್ಮಗಳ ಹಾಗೂ ಹಲವು ಭಾಷೆಗಳ ದೇಶ. ಯಾವುದೇ ಭಾಷೆ ವ್ಯಕ್ತಿ-ವ್ಯಕ್ತಿ, ವ್ಯಕ್ತಿ-ಸಂಸ್ಥೆ ಹೀಗೆ ಹಲವಾರು ವರ್ಗಸಮೂಹಗಳ ಸಂಪರ್ಕ ಬಿಂದು. ದೈನಂದಿನ ಜೀವನದಲ್ಲಿ ಭಾಷೆಗೆ ಅತ್ಯಂತ ಮಹತ್ವಪೂರ್ಣ ಸ್ಥಾನವಿದೆ. ಹಾಗೆಯೇ ಕಾರ್ಯಾಲಯದಲ್ಲಿ ಕೂಡ ಭಾಷೆಯ ಪಾತ್ರ ಹಿರಿದು.

ಈ ದಿನದ ಸಮ್ಮೇಳನದಲ್ಲಿ ನನಗೆ 'ಬ್ಯಾಂಕುಗಳಲ್ಲಿ ತ್ರಿಭಾಷೆ' ಎಂಬ ವಿಷಯದ ಬಗ್ಗೆ ಪ್ರಬಂಧ ಪ್ರಸ್ತುತಪಡಿಸಲು ಅವಕಾಶ ನೀಡಿರುವುದಕ್ಕಾಗಿ ನಾನು ಆಭಾರಿ. ಕಾರ್ಯಪಾಲಕನಾಗಿ ಬ್ಯಾಂಕಿನ ಆಗುಹೋಗುಗಳೆಡೆ ಸದಾ ಕಾತರನಾಗಿರಬೇಕಾದ ನನಗೆ ಕಾರ್ಯಾಲಯದ ಆಂತರಿಕ ಕೆಲಸ ಹಾಗೂ ಗ್ರಾಹಕರೊಡನೆ ಚರ್ಚೆ ಹೀಗೆ ಹಲವಾರು ಅನುಭವಗಳು ಪ್ರತಿ ದಿನ ಆಗುತ್ತವೆ.

ಸಮ್ಮೇಳನದಲ್ಲಿ ಉಪಸ್ಥಿತ ಮಹನೀಯರೂ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಇಂತಹುದೇ ಅನುಭವ ಹೊಂದಿರುವ ಕಾರಣ ನನ್ನ ಪ್ರಬಂಧದಲ್ಲಿ ಎಲ್ಲ ವಿಷಯಗಳನ್ನು ಸವಿವರವಾಗಿ ಉಲ್ಲೇಖಿಸದೆ ಕೆಲವೊಂದು ಮುಖ್ಯ ಅಂಶಗಳೆಡೆ ನನ್ನ ಚರ್ಚೆಯನ್ನು ಕೇಂದ್ರೀಕೃತಗೊಳಿಸಿದ್ದೇನೆ.

ಪ್ರಜಾತಾಂತ್ರಿಕ ಶಾಸನ ವ್ಯವಸ್ಥೆಯಲ್ಲಿ ಸಾಮಾನ್ಯ ವ್ಯಕ್ತಿ ಮತ್ತು ಸರ್ಕಾರದ ನಡುವೆ ಭಾಷೆ ಅಡ್ಡಗೋಡೆ ಆಗಬಾರದು. ಆಡಳಿತ ಜನತೆಯ ಭಾಷೆಯಲ್ಲೇ ನಡೆಯುವುದು ಸಮಂಜಸ ಮತ್ತು ಸೂಕ್ತ.

ವಿಚಾರ ವಿನಿಮಯ ವ್ಯಕ್ತಿ-ವ್ಯಕ್ತಿಗಳಿಗೆ ಸೀಮಿತಗೊಂಡಿರಲಿ ಅಥವಾ ತಾನು ನೌಕರಿ ಮಾಡುತ್ತಿರುವ ಸಂಸ್ಥೆಯ ಯೋಜನೆಗಳನ್ನು ಸಾರ್ವಜನಿಕರಿಗೆ ಅಥವಾ ಗ್ರಾಹಕರಿಗೆ ವಿವರಿಸಿ ಹೇಳುವುದಾಗಿರಲಿ, ಅದರಲ್ಲಿ ಭಾಷೆ ಪ್ರಮುಖ ಸ್ಥಾನ ವಹಿಸುತ್ತದೆ. ಯಾವುದೇ ವ್ಯಕ್ತಿ ತಾನು ಕಾರ್ಯನಿರತನಾಗಿರುವಾಗ ತನ್ನ ಸಂಸ್ಥೆಯನ್ನು ಪ್ರತಿಪಾದಿಸುತ್ತಾನೆ ಎನ್ನುವುದು ನಿರ್ವಿವಾದದ ವಿಷಯ. ಹೀಗಿರುವಾಗ, ಸಂಸ್ಥೆಗೆ ಭೇಟಿಕೊಟ್ಟು ಹೆಚ್ಚಿನ ಮಾಹಿತಿ ಬಯಸುವ ವ್ಯಕ್ತಿಗೆ ಮನದಟ್ಟಾಗುವ ಹಾಗೆ ತನ್ನ ಸಂಸ್ಥೆಯ ಬಗ್ಗೆ ತಿಳಿಸಿ ಹೇಳಲು ವಿಫಲನಾದಾಗ ಅವನ ವ್ಯಕ್ತಿತ್ವದ ಹಾಗೂ ಸಂಸ್ಥೆಯ ಬಗ್ಗೆ ತಪ್ಪು ಅಭಿಪ್ರಾಯ ತಲೆದೋರುವುದು ಸಹಜ. ಇಂಥ ಪರಿಸ್ಥಿತಿಗಳು ಬಂದಾಗ ಆ ವ್ಯಕ್ತಿಗೆ ತಿಳಿಯುವ ಭಾಷಾಮಾಧ್ಯಮದ ಮೂಲಕ ವಿಚಾರವಿನಿಮಯ ಮಾಡಿದಾಗ ಸಿಗುವ ಪ್ರತಿಫಲವೇ ಬೇರೆ. ಬ್ಯಾಂಕಿಂಗ್ ಸಂಸ್ಥೆಗಳು ಇಂಥ ಸಂದರ್ಭಗಳನ್ನು ಪ್ರತಿ ದಿನ ಎದುರಿಸಬೇಕಾಗುತ್ತದೆ.

**ಬ್ಯಾಂಕು ಮತ್ತು ತ್ರಿಭಾಷೆ**

ಶೀರ್ಷಿಕೆಯೇ ಹೇಳುವ ಹಾಗೆ ತ್ರಿಭಾಷೆ ಎಂದರೆ ಮೂರು ಭಾಷೆಗಳು. ಕರ್ನಾಟಕದ ಸಂದರ್ಭದಲ್ಲಿ ಇಂಗ್ಲಿಷ್, ಹಿಂದಿ, ಕನ್ನಡ. ಆದರೆ ಈ ಮೂರು ಭಾಷೆಗಳು ಯಾವುವು? ಎಲ್ಲ ಸಂದರ್ಭಗಳಲ್ಲೂ ನಾವು ಈ ತ್ರಿಭಾಷಾ ಸೂತ್ರ ಅಳವಡಿಸಿಕೊಳ್ಳಬೇಕೆ ಎನ್ನುವುದು ಈಗ ಚರ್ಚಾಸ್ಪದ ವಿಷಯವಾಗಿದೆ. ರಾಷ್ಟ್ರೀಕೃತ ಬ್ಯಾಂಕುಗಳು ಮತ್ತು ಭಾರತೀಯ ಸ್ಟೇಟ್ ಬ್ಯಾಂಕ್, ಅದರ ಏಳು ಸಹಯೋಗಿ ಬ್ಯಾಂಕುಗಳು ಒಂದು ಗುಂಪಾದರೆ, ಇನ್ನುಳಿದ ರಾಜ್ಯ ಸಹಕಾರಿ ಬ್ಯಾಂಕುಗಳು ಇತ್ಯಾದಿ ಎರಡನೆಯ ಗುಂಪಿಗೆ ಸೇರಿವೆ.

ರಾಷ್ಟ್ರೀಕೃತ ಬ್ಯಾಂಕುಗಳೂ ಸೇರಿದಂತೆ ಅನ್ಯ ಎಂಟು ಬ್ಯಾಂಕುಗಳಲ್ಲಿ ತ್ರಿಭಾಷಾ ಸೂತ್ರದ ಪ್ರಕಾರ ಇಂಗ್ಲಿಷ್, ಹಿಂದಿ ಮತ್ತು ರಾಜ್ಯದ ಆಡಳಿತ ಭಾಷೆಯಲ್ಲಿ ವ್ಯವಹಾರ ನಡೆಯುತ್ತಿದೆ. ಗ್ರಾಹಕನೆ ಬ್ಯಾಂಕಿನ ಕೇಂದ್ರಬಿಂದು. ಅವನ ಸುತ್ತ ಬ್ಯಾಂಕಿಂಗ್ ವ್ಯವಹಾರಗಳು ನಡೆಯುತ್ತವೆ. ಯಾವುದೇ ವ್ಯಕ್ತಿ ತನ್ನ ಹಣದ ಸುಭದ್ರ ಉಳಿತಾಯಕ್ಕೆ ಬ್ಯಾಂಕಿನ ಯೋಜನೆಗಳ ಉಪಯೋಗ ಪಡೆಯಬಹುದು ಅಥವಾ ತನ್ನ ಆವಶ್ಯಕತೆಗಳ ಪೂರೈಕೆಗೆ ಬ್ಯಾಂಕಿನಿಂದ ಸಾಲ ಪಡೆಯಬಲ್ಲ. ಇಂಥ ಪರಿಸ್ಥಿತಿಯಲ್ಲಿ ಗ್ರಾಹಕನ ಭಾಷೆಯಲ್ಲೇ ಮನದಟ್ಟಾಗುವಂತೆ ವ್ಯವಹಾರ ನಡೆಸುವುದು ಸಮಂಜಸ. ಬ್ಯಾಂಕಿನಲ್ಲಿ ಭಾಷೆಯ ಬಳಕೆ ಮೂರು ಕ್ಷೇತ್ರಗಳಲ್ಲಿ ಆಗುತ್ತದೆ:

**ಆಂತರಿಕ ವ್ಯವಹಾರ:** ಇದನ್ನು ಬ್ಯಾಂಕು-ಬ್ಯಾಂಕುಗಳ ಮಧ್ಯೆ ಮತ್ತು ಬ್ಯಾಂಕು-ಸಿಬ್ಬಂದಿಯ ನಡುವೆ ಎಂದು ವಿಭಾಗಿಸಬಹುದು. ಇದರ ಹೊರಗೆ ಭಾಷೆಯ ಬಳಕೆ ಹೆಚ್ಚಾಗಿ ಆಗುವುದು ಬ್ಯಾಂಕ್ ಗ್ರಾಹಕ ಅಥವಾ ಸಾರ್ವಜನಿಕ ಬಳಕೆದಾರನ ಜೊತೆ—ಮೌಖಿಕ ಮತ್ತು ಪತ್ರದ ಮೂಲಕ ಆಗುವುದು.

ಪತ್ರ ವ್ಯವಹಾರ, ಧನ್ಯವಾದ ಸಮರ್ಪಣೆ, ಸಾಲ-ಸೌಲಭ್ಯ ನೀಡಿಕೆಯ ಸೂಚನೆ ಹೀಗೆ ಇದು ಹಲವಾರು ರೀತಿಯದಾಗಿರುವುದು. ಈ ಪತ್ರಾಚಾರ ಗ್ರಾಹಕನಿಗೆ ತಿಳಿಯುವ ಭಾಷೆಯಲ್ಲಿದ್ದರೆ ಬ್ಯಾಂಕ್ ಗ್ರಾಹಕ ಸಂಬಂಧ ಇನ್ನೂ ಹೆಚ್ಚುವುದು. ಈ ಮೊದಲೇ ತಿಳಿಸಿರುವ ಹಾಗೆ ರಾಷ್ಟ್ರೀಕೃತ ಬ್ಯಾಂಕುಗಳು ಭಾರತ ಸರ್ಕಾರದ ಸ್ವಾಮ್ಯಕ್ಕೆ ಒಳಪಟ್ಟಿವೆ. ಸರ್ಕಾರದ ಭಾಷಾನೀತಿಗನುಸಾರವಾಗಿ ಬ್ಯಾಂಕುಗಳ ವ್ಯವಹಾರ ಹಿಂದಿ ಮತ್ತು ಇಂಗ್ಲಿಷ್ ಭಾಷೆಗೆ ಸೀಮಿತ. ಗ್ರಾಹಕ ಸೇವೆ ಮತ್ತು ಸಾರ್ವಜನಿಕ ಸಂಪರ್ಕ ಸ್ಥಳಗಳಲ್ಲಿ ಮೇಲೆ ಹೇಳಿದ ಭಾಷೆಗಳ ಜೊತೆ ಪ್ರಾದೇಶಿಕ ಭಾಷೆಯ ಬಳಕೆಗೂ ಅನುವು ಮಾಡಿಕೊಡಲಾಗಿದೆ.

ಇನ್ನು ಆಂತರಿಕ ವ್ಯವಹಾರವನ್ನೇ ತೆಗೆದುಕೊಂಡಿದ್ದಾದರೆ ಈ ವ್ಯವಹಾರ ಬ್ಯಾಂಕು-ಬ್ಯಾಂಕುಗಳ ನಡುವೆ ಅಥವಾ ಸಿಬ್ಬಂದಿಯ ಜೊತೆಗಿನ ಪತ್ರವ್ಯವಹಾರ ಮತ್ತು ದೈನಂದಿನ ಲೆಕ್ಕಪತ್ರಗಳ ವಹಿವಾಟು ಪರಿಶೀಲಿಸುವಿಕೆ ಆಗಿದೆ.

ಬ್ಯಾಂಕು-ಬ್ಯಾಂಕುಗಳ ನಡುವೆ ನಡೆಯುವ ವ್ಯವಹಾರಗಳು ಭಾರತ ಸರ್ಕಾರದ ಆದೇಶದಂತೆ ಹಿಂದಿ ಮತ್ತು ಇಂಗ್ಲಿಷ್ ಭಾಷೆಗಳಿಗೆ ಸೀಮಿತ ಎನ್ನುವುದು ಸರ್ವರಿಗೂ ವಿದಿತ. ಆದರೆ ಒಂದು

(ಮುಂದಿನ ಪುಟಕ್ಕೆ)

ಹಾ. ಗು. ಬಾಲಗೋಪಾಲ್, ಮುಖ್ಯ ವ್ಯವಸ್ಥಾಪಕರು, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಬೆಂಗಳೂರು ಶಾಖೆ, ಬೆಂಗಳೂರು 9

# ವಾಣಿಜ್ಯ ಬ್ಯಾಂಕುಗಳಲ್ಲಿ ಕನ್ನಡದ ಬಳಕೆ

**ಬಿ. ಎಂ. ಆಚಾರ್**

1985 ನವಂಬರ್ ಒಂದರಿಂದ ಕರ್ನಾಟಕ ರಾಜ್ಯದಲ್ಲಿ ಕನ್ನಡ ವರ್ಷವನ್ನು ಆಚರಿಸುತ್ತಿದ್ದೇವೆ. ಅಲ್ಲದೆ ಬಹು ಹಿಂದೆಯೆ ಆಗಬೇಕಾಗಿದ್ದ ವಿಶ್ವ ಕನ್ನಡ ಸಮ್ಮೇಳನವನ್ನು ಇದೇ ಡಿಸೆಂಬರ್ 14, 15, 16ರಂದು ಮೈಸೂರಿನಲ್ಲಿ ವೈಭವವಾಗಿ ಆಚರಿಸಿದ್ದೇವೆ. ಮಾನ್ಯ ಮುಖ್ಯಮಂತ್ರಿ ಶ್ರೀ ರಾಮಕೃಷ್ಣ ಹೆಗಡೆಯವರು ಆಡಳಿತ ಭಾಷೆ ಕನ್ನಡಕ್ಕಾಗಿ ಬಹು ಒತ್ತು ಕೊಟ್ಟಿದ್ದಾರೆ.

ಬಿ. ಎಂ. ಆಚಾರ್, ಅಧಿಕಾರಿ, ಸಿಂಡಿಕೇಟ್ ಬ್ಯಾಂಕ್, ವಿಭಾಗೀಯ ಅಧಿಕಾರಿ ಕಛೇರಿ, ಮೈಸೂರು

ವಾಣಿಜ್ಯ ಬ್ಯಾಂಕುಗಳಲ್ಲಿ ಕನ್ನಡ ಭಾಷೆ ಇನ್ನೂ ತೊಟ್ಟಿಲಲ್ಲಿ ಇದೆ. ಅಂಬೆಗಾಲು ಇಡುತ್ತಿಲ್ಲ. ಇಂದಿನ ದಿನಗಳಲ್ಲಿ 100ಕ್ಕೆ 85 ರಷ್ಟು ಜನರ ವ್ಯವಹಾರ ಬ್ಯಾಂಕಿನ ವ್ಯವಹಾರದ ಜೊತೆ ಹಾಸು ಹೊಕ್ಕಾಗಿದೆ. ಆ ವ್ಯವಹಾರ ಇನ್ನೂ 100ಕ್ಕೆ 95ರಷ್ಟು ಇಂಗ್ಲಿಷಿನಲ್ಲಿ ನಡೆಯುವುದು ಎಂಥ ವಿಪರ್ಯಾಸ! ಹಿಂದಿ ರಾಷ್ಟ್ರಭಾಷೆಯಾದ್ದರಿಂದ ಅಲ್ಪಸ್ವಲ್ಪ ಸುತ್ತೋಲೆಗಳು ಹಿಂದಿಗೆ ಮೀಸಲು, ಆದರೆ ಕನ್ನಡವಲ್ಲಿ ವ್ಯವಹಾರ ಮಾತ್ರ ಶೂನ್ಯ ಈ ದಿಶೆಯಲ್ಲಿ ಕನ್ನಡ ಸಂಘಗಳಲ್ಲಿ ಕನ್ನಡ ಹೋರಾಟ ಸಮಿತಿಗಳಾಗಲಿ ಕನ್ನಡ ಕಟ್ಟಿದೆಯ ವೀರರ ಚಿಂತನೆಗಳು ಹಾಗೂ ವಿಚಾರಗಳಾಗಲಿ ಅಪೂರ್ಣವಾಗಿವೆ.

ಇದಕ್ಕೆ ಕಾರಣಗಳು ಈ ರೀತಿ ಇವೆಯೆನ್ನಲಾಗಿದೆ :

1 ಬ್ಯಾಂಕಿನ ವ್ಯವಹಾರ ಅಖಿಲ ಭಾರತ ಮಟ್ಟದಲ್ಲಿ ಕೇಂದ್ರದ ಒಡೆತನಕ್ಕೆ ಸೇರಿದ್ದರಿಂದ ಪ್ರಾದೇಶಿಕ ಭಾಷೆಗಳಾದ ಕನ್ನಡ, ತೆಲುಗು, ಮಲೆಯಾಳ ಮುಂತಾದವುಗಳಲ್ಲಿ ವ್ಯವಹಾರ ಕಷ್ಟ, ಬಹುತೇಕ ಅಸಾಧ್ಯ.

2 ಈಗ ಬ್ಯಾಂಕಿನಲ್ಲಿ ಬಳಕೆಯಲ್ಲಿರುವ ಇಂಗ್ಲಿಷ್ ಪದಗಳಿಗೆ ಸಮಾನ ಪದಗಳು ಸಿಗುವುದು ಕಷ್ಟ. ಸಿಕ್ಕರೂ ಅವು ಸಾಮಾನ್ಯರಿಗೆ ಅರ್ಥವಾಗುವುದು ಇನ್ನೂ ಕಷ್ಟ. (ಮುಂದಿನ ಪುಟಕ್ಕೆ)

---

(ಹಿಂದಿನ ಪುಟದಿಂದ)

ರಾಷ್ಟ್ರೀಕೃತ ಬ್ಯಾಂಕು ಮತ್ತು ರಾಜ್ಯದ ಸಹಕಾರಿ ಬ್ಯಾಂಕುಗಳ ಮಧ್ಯೆ ವ್ಯವಹಾರ ನಡೆಯುವಾಗ ಭಾಷಾ ಸಮಸ್ಯೆ ತಲೆದೋರುವುದು ಸಹಜ. ಸಹಕಾರಿ ಬ್ಯಾಂಕುಗಳು ಪ್ರಾದೇಶಿಕ ಭಾಷೆಯಲ್ಲೇ ಪತ್ರವ್ಯವಹಾರ ಮಾಡಿದಾಗ ಅವುಗಳ ಉತ್ತರ ಅದೇ ಭಾಷೆಯಲ್ಲಿ ಇರಬೇಕಾದ್ದು ಆವಶ್ಯಕ. ಗ್ರಾಹಕನಿಂದ ಬ್ಯಾಂಕ್ ಸೇವೆಗಳ ಬಗ್ಗೆ ಮಾಹಿತಿ ಅಥವಾ ದೂರುಗಳು ಪ್ರಾದೇಶಿಕ ಭಾಷೆಯಲ್ಲಿ ಬಂದಾಗ ಆ ಭಾಷೆಯಲ್ಲೇ ಉತ್ತರ ಕಳುಹಿಸಬೇಕು. ತ್ರಿಭಾಷೆಗಳ ಬಳಕೆ ಒಂದೇ ಅರ್ಜಿ ನಮೂನೆಯಲ್ಲಿ ಸಾಧ್ಯವೇ ? ಕೆಲವು ಅರ್ಜಿ ನಮೂನೆಗಳಲ್ಲಿ ತ್ರಿಭಾಷೆಯ ಬಳಕೆ ಸಾಧ್ಯ. ಗ್ರಾಹಕ ತನ್ನ ಭಾಷೆಯಲ್ಲಿ ಅರ್ಜಿ ನಮೂನೆ ಭರ್ತಿ ಮಾಡಬಹುದು. ಹಣ ಹಿಂಪಡೆತದ ಅರ್ಜಿ ನಮೂನೆ, ಡಿಮಾಂಡ್ ಡ್ರಾಫ್ಟ್‌ಗಾಗಿ ಕೋರಿಕೆ, ಹೀಗೆ ಹಲವಾರು ಅರ್ಜಿ ನಮೂನೆಗಳಲ್ಲಿ ತ್ರಿಭಾಷಾ ಬಳಕೆ ಸಾಧ್ಯ. ಎಲ್ಲಿ ಮೂರು ಭಾಷೆಗಳ ಬಳಕೆ ಸಾಧ್ಯವಿಲ್ಲವೋ ಅಲ್ಲಿ ಪ್ರಾದೇಶಿಕ ಭಾಷೆಯಲ್ಲಿ ನಮೂನೆಗಳನ್ನು ಪ್ರತ್ಯೇಕವಾಗಿ ಮುದ್ರಿಸಿ ನೀಡಬಹುದು. ಇನ್ನು ಗ್ರಾಹಕರಿಗೆ ತಮ್ಮ ಭಾಷೆಯ ಬಳಕೆಯ ಸೌಲಭ್ಯ ಒದಗಿಸಿ ಕೊಟ್ಟ ಮೇಲೆ ಅಂತರಿಕ ಕಾರ್ಯದಲ್ಲಿ ಪ್ರಾದೇಶಿಕ ಭಾಷೆಯ ಬಳಕೆಗೆ ಅವಕಾಶ ಏಕೆ ಮಾಡಿಕೊಡಬಾರದು ಎನ್ನುವುದು ಸಹಜ ಪ್ರಶ್ನೆ. ಇತ್ತೀಚೆಗೆ ಕನ್ನಡ ಕಾವಲು ಸಮಿತಿಯ ಅಧ್ಯಕ್ಷ ಶ್ರೀ ಪಾಟೀಲ ಪುಟ್ಟಪ್ಪನವರು ಬ್ಯಾಂಕುಗಳ ಅಧ್ಯಕ್ಷರ ಸಭೆ ಕರೆಯುವ ಸೂಚನೆ ನೀಡಿರುವುದು ಈ ದಿಶೆಯಲ್ಲಿ ಗಮನಾರ್ಹ ಸಂಗತಿ. ಹೆಚ್ಚುಹೆಚ್ಚಾಗಿ ಪ್ರಾದೇಶಿಕ ಭಾಷೆಯ ಬಳಕೆಯ ಪ್ರಾರಂಭ ಬ್ಯಾಂಕುಗಳ ಗ್ರಾಮೀಣ ಶಾಖೆಗಳಲ್ಲಾಗಬೇಕು. ಗ್ರಾಮೀಣ ಜನತೆಯ ಭಾಷೆಯಲ್ಲಿ ವ್ಯವಹಾರ ನಡೆದಾಗ ಮಾತ್ರ ಬ್ಯಾಂಕ್ ಕಾರ್ಯಕ್ರಮಗಳು ಸಫಲವಾಗುತ್ತವೆ. ಪ್ರಾದೇಶಿಕ ಭಾಷೆಗಳಲ್ಲಿ ಪತ್ರವ್ಯವಹಾರ ನಡೆಸಲು ಬ್ಯಾಂಕಿಂಗ್ ಕ್ಷೇತ್ರದ ಆಂಗ್ಲ ಪದಗಳಿಗೆ ಪ್ರಾದೇಶಿಕ ಭಾಷೆಯಲ್ಲಿ ಸಮನಾದ ಪದಗಳಿಲ್ಲ ಎಂಬ ಮಾತು ಕೇಳಬರುತ್ತಿದೆ. ಆದರೆ ನಮ್ಮ ರಾಜ್ಯದ ಆಡಳಿತ ಭಾಷೆಯಾದ ಕನ್ನಡದಲ್ಲಿ ಈಗಾಗಲೇ ಹಲವಾರು ಸಂದರ್ಭ ಸಾಹಿತ್ಯಗಳು ಪ್ರಕಟವಾಗಿವೆ. ಇತ್ತೀಚೆಗೆ ಪ್ರಾಚಾರ್ಯ ಎಚ್ಚೆಸ್ಕೆಯವರ ಸಂಪಾದಕತ್ವದಲ್ಲಿ ಹೊರತಂದಿರುವ ಬ್ಯಾಂಕಿಂಗ್ ನಿಘಂಟು ಅತ್ಯಂತ ಉಪಯುಕ್ತ ಪ್ರಕಾಶನ. ಇನ್ನೂ ಹೆಚ್ಚಾಗಿ ಸಂದರ್ಭ ಸಾಹಿತ್ಯಗಳು ಬ್ಯಾಂಕ್ ಸಿಬ್ಬಂದಿಗೆ ನೀಡಬೇಕು. ಇದರಿಂದ ಭಾಷೆಯನ್ನು ಬಳಸುವಲ್ಲಿ ಸಿಬ್ಬಂದಿ ವರ್ಗದವರಿಗಿರುವ ಭಯ ಶಂಕೆಗಳು ದೂರವಾಗುವವು ಎನ್ನುವ ಭರವಸೆ ನನಗಿದೆ.

ಕರ್ನಾಟಕ ರಾಜ್ಯದ ಬ್ಯಾಂಕುಗಳಲ್ಲಿ ತ್ರಿಭಾಷಾ ಸೂತ್ರದ ಅನುಸಾರ ಕನ್ನಡ ಭಾಷೆಯನ್ನು ಹೆಚ್ಚುಹೆಚ್ಚಾಗಿ ಬಳಸಲು ಸಾಧ್ಯವಾಗುವಂತೆ ಮಾಡಲು ನನ್ನ ಸಲಹೆಗಳು ಹೀಗಿವೆ :

1 ಸಾರ್ವಜನಿಕ ಸಂಪರ್ಕ ಮತ್ತು ಗ್ರಾಹಕ ಉಪಯೋಗಿಸುವ ಎಲ್ಲ ಲೇಖನ ಸಾಮಗ್ರಿಗಳಲ್ಲಿ ಕನ್ನಡ ಭಾಷೆಯ ಬಳಕೆ,

2 ರಾಜ್ಯದ ಎಲ್ಲ ಆಡಳಿತ ಕಛೇರಿಗಳೊಂದಿಗೆ ಪತ್ರವ್ಯವಹಾರ ಕನ್ನಡದಲ್ಲಿ ಮಾಡಲು ಪ್ರಯತ್ನ,

3 ಸಾರ್ವಜನಿಕ ಸಂಪರ್ಕದಲ್ಲಿ ಬರುವ ಎಲ್ಲ ರಬ್ಬರ್ ಮೊಹರುಗಳಲ್ಲಿ ಕನ್ನಡ ಬಳಕೆ,

4 ಬ್ಯಾಂಕಿನ ಸಿಬ್ಬಂದಿ ವರ್ಗದ ಎಲ್ಲ ಸದಸ್ಯರಿಗೂ ಕನ್ನಡ ಭಾಷೆಯ ಬಳಕೆ ಮತ್ತು ಪತ್ರವ್ಯವಹಾರದ ಬಗ್ಗೆ ಬ್ಯಾಂಕಿನ ಸಿಬ್ಬಂದಿ ತರಬೇತಿ ಕಾರ್ಯಕ್ರಮಗಳು,

5 ಬ್ಯಾಂಕಿನ ಶಾಖೆಗಳಿಗೆ ಕನ್ನಡ ಬೆರಳಚ್ಚುಗಾರರು, ಬೆರಳಚ್ಚು ಯಂತ್ರಗಳ ಸೌಲಭ್ಯ,

6 ಸಂದರ್ಭ ಸಾಹಿತ್ಯದ ಪೂರೈಕೆ,

7 ಸಮನ್ವಯ ಸಮಿತಿಯ ಕನ್ನಡ ಕಮ್ಮಟದ ಹಾಗೆ ಕಮ್ಮಟಗಳನ್ನು ಬ್ಯಾಂಕಿನಲ್ಲಿ ನಡೆಸಿ ಗ್ರಾಹಕರು ಉಪಯೋಗಿಸುವ ದಾಖಲೆ ಪತ್ರಗಳನ್ನು (ವಿಶೇಷವಾಗಿ ಕೃಷಿ ಸಾಲಕ್ಕೆ ಸಂಬಂಧಿಸಿದವು). ನಮೂನೆ ಇತ್ಯಾದಿಗಳನ್ನು ಕನ್ನಡದಲ್ಲಿ ಭಾಷಾಂತರ ಮಾಡುವಿಕೆ; ಇದರಿಂದ ರಾಜ್ಯದ ಎಲ್ಲ ಬ್ಯಾಂಕುಗಳಲ್ಲಿನ ನಮೂನೆ ಇತ್ಯಾದಿಗಳಲ್ಲಿನ ಪದಸಮೂಹಗಳಲ್ಲಿ ಏಕರೂಪತೆ ಬರುವುದು.

3 ಉನ್ನತಮಟ್ಟದಲ್ಲಿ ಕನ್ನಡವನ್ನು ಅಧಿಕೃತವಾಗಿ ವ್ಯವಹರಿಸಬಲ್ಲ ಅಧಿಕಾರಿಗಳ ಸಂಖ್ಯೆ ಕಡಿಮೆ. ಇದ್ದ ಕೆಲವು ಅಧಿಕಾರಿಗಳು ಕನ್ನಡವನ್ನು ಬಳಸಿದರೆ ಅವರ ಯೋಗ್ಯತೆಗೆ ಕಡಿಮೆ ಎಂಬ ಭಾವನೆ.

4 ಕನ್ನಡದವರೇ ಕನ್ನಡನಾಡಿನಲ್ಲಿ ಸ್ಥಾಪಿಸಿದ ವಾಣಿಜ್ಯ ಬ್ಯಾಂಕುಗಳು ಅಖಿಲ ಭಾರತಮಟ್ಟದಲ್ಲಿ ಬೆಳೆದದ್ದರಿಂದ ಕನ್ನಡ ಭಾಷೆಯನ್ನು ಬೆಳೆಸಲು ಅವುಗಳ ನೇತಾರರಿಗೆ ಮುಜುಗರವಾಗಿದೆ. ಆದರೆ ತಮಿಳು ತೆಲುಗರು ಇದಕ್ಕೆ ಆಸ್ಪದ ಕೊಟ್ಟಿಲ್ಲ.

5 ಪ್ರಾದೇಶಿಕ ಭಾಷೆಯನ್ನು ಅಖಿಲ ಭಾರತ ಮಟ್ಟದಲ್ಲಿ ಬೆಳೆಸಲು ಕಷ್ಟ ಹಾಗೂ ಅನಾವಶ್ಯಕ ಚರ್ಚೆಗಳನ್ನು ಭರಿಸಬೇಕಾಗುತ್ತದೆ.

6 ಪ್ರಾದೇಶಿಕ ಭಾಷೆಯ ಅಭಿಮಾನದಿಂದ ಸಿಬ್ಬಂದಿಯ ವರ್ಗಾವಣೆ, ನಿಯಂತ್ರಣಗಳಲ್ಲಿ ತುಂಬ ತೊಂದರೆ ಎಂಬ ಭಾವನೆ.

7 ಇತ್ತೀಚಿನ ಬ್ಯಾಂಕ್ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ಬರುತ್ತಿರುವ ಬಹುಮಂದಿ ಅಭ್ಯರ್ಥಿಗಳು ಕಾನ್ವೆಂಟಿನ ಪಕ್ಷಿಗಳು. ಇವರಿಗೆ ಕನ್ನಡ ಭಾಷೆಯ ಅಭಿಮಾನ ಇರುವುದು ಕಡಿಮೆ.

ಇಂಥ ಹಲವಾರು ಕಾರಣಗಳಿಂದ ಬ್ಯಾಂಕುಗಳಲ್ಲಿ ಕನ್ನಡದ ಬಳಕೆ ತುಂಬ ಕಡಿಮೆ ಇದೆ. ಸಾಮಾನ್ಯ ಗ್ರಾಹಕ ಹೇಗೂ ಹಣ ಇಟ್ಟು ತೆಗೆದುಕೊಂಡು, ವ್ಯವಹಾರ ನಡಸುತ್ತಾನೆ. ನಿಜವಾಗಿ ಕಷ್ಟ ಸಂಭವಿಸುವುದು ಬ್ಯಾಂಕಿನ ಸಾಲಗಾರರಿಗೆ. ಅವರು ಸಾಲ ಪಡೆದು ಅದನ್ನು ಮರಳಿ ಕೊಡುವಾಗ ಬ್ಯಾಂಕಿನವರ ಹಲವಾರು ಪತ್ರಗಳಿಗೆ ಸಹಿ ಹಾಕಬೇಕಾಗುತ್ತದೆ. ಈ ಎಲ್ಲ ಪತ್ರಗಳು ಇಂಗ್ಲಿಷ್ ಹಿಂದಿಯಲ್ಲಿ ಇರುತ್ತವೆ.

ಭಾರತ ಹಳ್ಳಿಗಳ ದೇಶ. ಅದರಲ್ಲಿ ಅವಿದ್ಯಾವಂತರು ಹೆಚ್ಚು. ಸ್ವಲ್ಪ ಕನ್ನಡ ಭಾಷೆ ಅರಿತ ಗ್ರಾಹಕನಿಗೂ ಪರಭಾಷೆಯ ದಬ್ಬಾಳಿಕೆಯಿಂದ ವ್ಯವಹಾರವೆಲ್ಲ ಶೂನ್ಯವಾಗಿದೆ. ಬ್ಯಾಂಕಿನ ಸಿಬ್ಬಂದಿಗಳು ಬರೆದುಕೊಂಡಿದ್ದೇ ನಿಜ. ಅವರು ಏನು ಬರೆದುಕೊಂಡಿದ್ದಾರೆ ಎಂದು ಹೇಳುವ ಸೌಜನ್ಯ ಅಥವಾ ಹೊಣೆಗಾರಿಕೆ ಸಿಬ್ಬಂದಿಗೆ ಇರುವುದಿಲ್ಲ; ಕೇಳುವ ಧೈರ್ಯ ಗ್ರಾಹಕರಿಗೆ ಇರುವುದಿಲ್ಲ. ಕೇಳಿದರೆ ಸಿಗುವ ಸಾಲಕ್ಕೆ ಎಲ್ಲಿ ತೊಂದರೆ ಬರುತ್ತದೋ ಎಂಬ ಭಯ. ಅಲ್ಲದೆ ಸಾಲಗಾರನಿಗೆ ಸಾಲದ ರೂಪದಲ್ಲಿ ಸಿಗುವ ಹಣಕ್ಕಾಗಿ ಅವನ ಅಲೆದಾಟ, ಪರದಾಟ, ಪಡುವ ಕಷ್ಟ, ಅವನು ಅನುಭವಿಸಿದ ಅನುಭವ ಅವನಿಗೆ ಗೊತ್ತು. ಅದನ್ನು ಪರರಿಗೆ ಹೇಳುವಂತಿಲ್ಲ. ಇಂಥ ವೇಳೆಯಲ್ಲಿ ಪತ್ರದ ಬಗ್ಗೆ ಅವನು ಉಸಿರೆತ್ತಿದರೆ ಅದಕ್ಕೂ ಬೀಳುತ್ತದೆ ಕಲ್ಲು.

ಇದೂ ಅಲ್ಲದೆ ಅವನು ಕಾರಣಾಂತರದಿಂದ ಸಾಲ ತೀರಿಸುವಾಗ ವಿಳಂಬ ಆದಾಗ ಅಥವಾ ಸಾಲ ತೀರಿಸುವುದು ಅಸಾಧ್ಯ ಆದಾಗ ಬ್ಯಾಂಕಿನವರು ನ್ಯಾಯಾಲಯಕ್ಕೆ ಹೋಗುತ್ತಾರೆ. ಆಗ ಸಾಲಗಾರನ ಸ್ಥಿತಿ ಇನ್ನೂ ಶೋಚನೀಯ. ಬ್ಯಾಂಕಿನ ಹಾಗೂ ನ್ಯಾಯಾಲಯದ ವ್ಯವಹಾರ ಪರಭಾಷೆಯಲ್ಲಿ ಇರುವುದರಿಂದ ಸಾಲಗಾರನಿಗೆ ನಿಜವಾದ ನ್ಯಾಯ ಸಿಗುವುದಿಲ್ಲ. ಆಂಗ್ಲರು ಭಾರತ ಬಿಟ್ಟು ಹೋದರೂ ಈ ಪಟ್ಟಭದ್ರಹಿತಾಸಕ್ತಿಗಳ ಮಧ್ಯೆ ಆಂಗ್ಲ ಭಾಷೆ ವೈಭವದಿಂದ ಮೆರೆಯುತ್ತಿದೆ. ಈ ಭಾಷೆಯನ್ನು ತೆಗೆದು ಕನ್ನಡ ವ್ಯವಹಾರದ ಹಾಗೂ ಆಡಳಿತದ ಭಾಷೆ ಆಗಬೇಕೆಂದು ಎಷ್ಟು ತಿಳಿಯಹೇಳಿದರೂ ಈ ದುರಭಿಮಾನಿ ಜನ ಇದಕ್ಕೆ ಕಿವಿ ಕೊಡುತ್ತಿಲ್ಲ. ವ್ಯವಹಾರ ಹಾಗೂ ಆಡಳಿತ ಭಾಷೆ ಕನ್ನಡವಾದರೆ ಗ್ರಾಹಕ ತನ್ನ ವ್ಯವಹಾರವನ್ನು ತಾನೂ ತಿಳಿದುಕೊಂಡು ತನ್ನ ತಪ್ಪನ್ನು ಸರಿಪಡಿಸಿಕೊಳ್ಳುತ್ತಾನೆ. ಈಗ ಇವನಿಗೆ ತಿಳಿಯುತ್ತಲೂ ಇಲ್ಲ. ಅದರ ಬಗ್ಗೆ ವಿಚಾರಮಾಡುತ್ತಲೇ ಇಲ್ಲ. ಬೇರೆಯವರು ಹೇಳಿದ್ದನ್ನೇ ನಂಬಬೇಕಾಗಿದೆ.

ಅಂತಹ ಅವ್ಯವಹಾರ ಅನ್ಯಾಯ ತಡೆಯಲು ಹಾಗೂ ಬ್ಯಾಂಕಿನ ವ್ಯವಹಾರಗಳು ಸಾಮಾನ್ಯರಿಗೆ ತಿಳಿಯುವಂತೆ ಮಾಡಲು ಕನ್ನಡ ಭಾಷೆಯನ್ನು ಬ್ಯಾಂಕುಗಳಲ್ಲಿ ಉಪಯೋಗಿಸುವುದು ಅತ್ಯಂತ ಅವಶ್ಯ. ಇದಕ್ಕಾಗಿ ಲವು ಸೂಚನೆಗಳನ್ನು ಕೊಡಲು ಬಯಸುತ್ತೇನೆ :

1 ಸಾಮಾನ್ಯವಾಗಿ ಅತಿ ಹೆಚ್ಚು ಬಳಕೆಯಲ್ಲಿ ಬರುವ ಬ್ಯಾಂಕಿನ ವ್ಯವಹಾರದ, ಅದರಲ್ಲೂ ಸಾಲದ, ಪತ್ರಗಳು ಮೊದಲು ಕನ್ನಡ ಭಾಷೆಯಲ್ಲಿ ಇರಬೇಕು. ಅನಂತರ ಇಂಗ್ಲಿಷ್ ಹಾಗೂ ಹಿಂದಿಯಲ್ಲಿ ಇದ್ದರೆ ಸರಿ ಎನಿಸಬಹುದು.

2 ಕನ್ನಡ ಶಬ್ದ ಭಂಡಾರದಲ್ಲಿ ಸಿಗುವ ಬ್ಯಾಂಕಿನ ವ್ಯವಹಾರ ಕುರಿತ ಶಬ್ದಗಳು ಅಷ್ಟೇನೂ ಕಠಿಣವಲ್ಲ. ಒಂದು ವೇಳೆ ಕಠಿಣವೆನಿಸಿದರೆ ಇಂಗ್ಲಿಷ್ ಪದಗಳನ್ನೇ ಕನ್ನಡದಲ್ಲಿ ಯಥಾವತ್ತಾಗಿ ಬಳಸಬಹುದು.

3 ಸಾಲಕ್ಕಾಗಿ ಅರ್ಜಿ ಹಾಕುವಾಗ ಅರ್ಜಿ ಪತ್ರದಿಂದ ಹಿಡಿದು ಸಾಲ ಮಂಜೂರಾಗಿ ಸಾಲದ ಪತ್ರಗಳಲ್ಲಿ ಸಹಿ ಆಗುವವರೆಗೂ ಎಲ್ಲ ಪತ್ರಗಳೂ ಕನ್ನಡದಲ್ಲಿಯೇ ಇರಬೇಕು. ಅಂದರೆ ಸಾಲಗಾರನಿಗೆ ತನ್ನ ವ್ಯವಹಾರದ ಬಗ್ಗೆ ಅರಿವು ಇರುತ್ತದೆ. ಅಲ್ಲದೆ ಜವಾಬ್ದಾರಿಯೂ ಇರುತ್ತದೆ.

4 ಸಿಬ್ಬಂದಿಯ ನಿಯಂತ್ರಣದಲ್ಲಿ ಕನ್ನಡ ಭಾಷೆ ಉಪಯೋಗಿಸಿದರೆ ನಿಯಂತ್ರಣ ತೊಡಕಾಗವುದು ಎಂಬುದು ನೆಪ ಮಾತ್ರ. ಬೇರೆ ಬೇರೆ ಭಾಷೆಯ ಎಷ್ಟೋ ಮಂದಿ ಸಿಬ್ಬಂದಿಯವರು ಅತಿ ಉನ್ನತ ಮಟ್ಟದಲ್ಲಿ ಇದ್ದಾರೆ. ಇವರು ಬೇರೆ ಬೇರೆ ಪ್ರಾಂತಕ್ಕೆ ಹೋದಾಗ ಅಲ್ಲಿಯ ಭಾಷೆ ಕಲಿತು ಹೊಂದಿಕೊಂಡು ಹೋಗುತ್ತಾರೆ. ಅದೇ ರೀತಿ ಕನ್ನಡ ರಾಜ್ಯಕ್ಕೆ ಬಂದವರು ಕನ್ನಡ ಕಲಿಯಲಿ.

ಕೇಂದ್ರ ಹಾಗೂ ರಾಜ್ಯ ಸರ್ಕಾರ ಬ್ಯಾಂಕುಗಳ ಕಡೆ ಗಮನ ಹರಿಸಿ ಆಯಾ ರಾಜ್ಯಗಳಲ್ಲಿ ಪ್ರಾದೇಶಿಕ ಭಾಷೆಗಳು ವ್ಯವಹಾರ ಭಾಷೆಗಳಾಗಿ ಇರುವಂತೆ ನೋಡಿಕೊಳ್ಳಬೇಕು ಅದರಲ್ಲೂ ಸಾಲಗಾರರ ಅತಿಮುಖ್ಯವಾದ ಎಲ್ಲಾ ದಾಖಲೆ ಪತ್ರಗಳು ಆಯಾ ಪ್ರಾದೇಶಿಕ ಭಾಷೆಯಲ್ಲಿ ಇರಲೇಬೇಕೆಂದು ನಿರ್ಬಂಧ ಹೇರಬೇಕು. ಕನ್ನಡದ ಕ್ರಿಯಾ ಸಮಿತಿ, ಕಾವಲು ಸಮಿತಿ, ಕನ್ನಡ ಅಭಿಮಾನ ಸಂಘಗಳು, ಕನ್ನಡದ ಸ್ವಾಭಿಮಾನಿಗಳು ಇತ್ತ ಕಡೆ ಸ್ವಲ್ಪ ಗಮನ ಹರಿಸಿದರೆ ಖಂಡಿತ ವಾಣಿಜ್ಯ ಬ್ಯಾಂಕುಗಳಲ್ಲಿ ಇಂಗ್ಲಿಷ್ ಭಾಷೆಯ ಸ್ಥಾನದಲ್ಲಿ ಕನ್ನಡವನ್ನು ಬ್ಯಾಂಕಿನ ವ್ಯವಹಾರ ಭಾಷೆಯಾಗಿ (ಕರ್ನಾಟಕದಲ್ಲಿ) ಮಾಡುತ್ತಾರೆ. ಈ ದಿಶೆಯಲ್ಲಿ ಬೇರೆ ರಾಜ್ಯಗಳಲ್ಲಿ ಬ್ಯಾಂಕಿನ ದಾಖಲೆ ಪತ್ರಗಳನ್ನು ತಮ್ಮಲ್ಲಿಯ ಭಾಷೆಗಳಲ್ಲಿ ಮಾಡಿಕೊಂಡಿದ್ದಾರೆ. ಅದೇ ರೀತಿ ಕರ್ನಾಟಕ ರಾಜ್ಯದಲ್ಲಿ ಏಕೆ ಆಗಬಾರದು ಎಂಬ ಛಲ ಎಲ್ಲ ಕನ್ನಡರಿಗೂ ಬರಬೇಕು. ಆಗ ಮಾತ್ರ ಕನ್ನಡ ಭಾಷೆಯ ಅಭಿವೃದ್ಧಿ ಆಗುತ್ತದೆ, ಬ್ಯಾಂಕು ವ್ಯವಹಾರ ಸಫಲಗೊಳ್ಳುತ್ತದೆ.

# ಬ್ಯಾಂಕಿಂಗ್ ಸುದ್ದಿಸಾರ

ಕೆ. ಎನ್. ಮಹಾಬಲ

### ಬ್ಯಾಂಕಿಂಗ್—1985ರ ಸಾಧನೆ

ಸಾರ್ವಜನಿಕ ವಲಯದ ಬ್ಯಾಂಕುಗಳು 1985ರಲ್ಲಿ ರೂ. 110 ಕೋಟಿ ಲಾಭ ಸಂಪಾದಿಸಿವೆ. 1984ರ ಲಾಭದ ಮೊತ್ತ ರೂ. 83 ಕೋಟಿ. 1985ರಲ್ಲಿ ಲಾಭ ಶೇ 32.5ರ ಪ್ರಗತಿ ಕಂಡಿದೆ.

ಭಾರತೀಯ ಸ್ಟೇಟ್ ಬ್ಯಾಂಕ್, ಕೆನರಾ ಬ್ಯಾಂಕ್, ಕಾರ್ಪೋರೇಷನ್ ಬ್ಯಾಂಕ್ ಇವು ಕಾರ್ಯಪ್ರಗತಿಯಲ್ಲಿ ಮಹತ್ತರವಾದುದನ್ನು ಸಾಧಿಸಿವೆ. ಇಂಡಿಯನ್ ಬ್ಯಾಂಕ್, ನ್ಯೂ ಬ್ಯಾಂಕ್ ಆಫ್ ಇಂಡಿಯ, ಓರಿಯೆಂಟಲ್ ಬ್ಯಾಂಕ್ ಆಫ್ ಕಾಮರ್ಸ್, ವಿಜಯ ಬ್ಯಾಂಕ್, ಪಂಜಾಬ್ ಮತ್ತು ಸಿಂಧ್ ಬ್ಯಾಂಕ್ ಗಮನಾರ್ಹ ಪ್ರಗತಿ ಕಂಡಿವೆ.

ಬ್ಯಾಂಕ್ ಠೇವಣಿಗಳು 1985ರಲ್ಲಿ ಶೇ. 18.6 ಪ್ರಗತಿ ಸಾಧಿಸಿದುವು (1984ರಲ್ಲಿ ಶೇ 17).

ಆದ್ಯತಾ ವಲಯದ ಮುಂಗಡಗಳ ವಿಷಯದಲ್ಲಿ ಬ್ಯಾಂಕುಗಳು ತಮ್ಮ ಗುರಿ (ಶೇ 40) ದಾಟಿ ಒಟ್ಟು ಉದರಿಯ ಶೇ 43.1ನ್ನು ನೀಡಿವೆ. ಕೃಷಿ ವಲಯಕ್ಕೆ ಲಭಿಸಿರುವ ನೇರ ಧನಪೋಷಣೆ ಶೇ 15.2 (ಗುರಿ ಶೇ 15). ದುರ್ಬಲ ವರ್ಗದವರಿಗೆ ನೀಡಿರುವ ಸಾಲದಲ್ಲೂ ಪ್ರಗತಿಯಾಗಿದೆ. ಉದ್ದೇಶಿತ ಗುರಿ ಶೇ 10; ಸಾಧನೆ ಶೇ 10.8.

### 1986: ಗ್ರಾಹಕ ವರ್ಷ

ಗ್ರಾಹಕ ಸೇವೆಯ ಕ್ಷೇತ್ರದಲ್ಲಿ ಮಹತ್ತರವಾದ ಬದಲಾವಣೆಯನ್ನು ತರುವ ಉದ್ದೇಶದಿಂದ 1986ನ್ನು ಗ್ರಾಹಕವರ್ಷವೆಂದು ಕೇಂದ್ರ ಹಣಕಾಸು ಮಂತ್ರಿಗಳು ಘೋಷಿಸಿದ್ದಾರೆ. ಅದರಂತೆ ಇಂದು ಬ್ಯಾಂಕಿಂಗ್ ವಲಯದಲ್ಲಿ ಗ್ರಾಹಕ ಸಭೆಗಳು ವ್ಯಾಪಕವಾಗಿ ನಡೆಯುತ್ತಿವೆ.

### ಕಾಂತೀಯ ಮಸಿ ಲಿಪಿ ಗ್ರಾಹಕ ಚೆಕ್ ಬಳಕೆ

ಎಂ.ಐ.ಸಿ.ಆರ್. ತಂತ್ರಜ್ಞಾನ ಚೆಕ್ ಬಳಕೆಯ ಕ್ಷೇತ್ರದಲ್ಲಿ ದೃಢವಾಗಿ ಕಾಲಿರಿಸುತ್ತಿರುವ ಸಂದರ್ಭದಲ್ಲಿ ರಿಸರ್ವ್ ಬ್ಯಾಂಕ್ ಹಲವು ನಾಜೂಕಿನ ಮುನ್ನೆಚ್ಚರಿಕೆ ಕ್ರಮಗಳ ಬಗ್ಗೆ ತಿಳುವಳಿಕೆ ನೀಡಿದೆ. ಅವುಗಳಲ್ಲಿ ಮುಖ್ಯವಾದವೆಂದರೆ:

1 ಖಾತೆದಾರನ ಸಹಿ ಚೆಕ್ಕಿನ ಸಂಕೇತ ಪಟ್ಟಿಯನ್ನು (ಚೆಕ್‌ನ ಕೆಳಭಾಗ) ಅತಿಕ್ರಮಿಸಬಾರದು.

2 ಖಾತೆದಾರನ ಸಹಿಯನ್ನು ನಿರ್ದೇಶಿಸುವ ರಬ್ಬರ್ ಮೊಹರು ಮುಂತಾದುವು ಸಂಕೇತ ಪಟ್ಟಿಯನ್ನು ದಾಟಬಾರದು.

3 ಚೆಕ್ಕಿನ ಸಂಕೇತ ಪಟ್ಟಿಯ ಭಾಗವನ್ನು ಮಡಿಸಬಾರದು. ಅಂಚೆಯಲ್ಲಿ ರವಾನೆ ಮಾಡುವಾಗ ಮಡಿಸುವುದನ್ನು ನಿವಾರಿಸುವಂತೆ ಉದ್ದನೆಯ ಲಕೋಟೆಯನ್ನು ಬಳಸಬೇಕು.

4 ಚೆಕ್ಕಿನ ರೇಖಣವನ್ನು (crossing) ಸಂಕೇತ ಪಟ್ಟಿಗೆ ಧಕ್ಕೆಯಾಗದಂತೆ ಮಾಡಬೇಕು.

5 ಲೋಹದ ಅಂಶವುಳ್ಳ ಮಸಿಯನ್ನು ಸಹಿ ಮಾಡಲು ಬಳಸಬಾರದು.

6 ಸಂಕೇತ ಪಟ್ಟಿಯಲ್ಲಿ ರಂಧ್ರವಾಗದಂತೆ ಗುಂಡುಸೂಜಿ ಮತ್ತು ತಂತಿಹೊಲಿಗೆ ಯಂತ್ರ (ಸ್ಟೇಪ್ಲರ್) ಬಳಸುವಾಗ ಎಚ್ಚರಿಕೆ ವಹಿಸಬೇಕು.

### ರಫ್ತು ಸಿದ್ಧತಾ ಉದರಿ: ಬಡ್ಡಿದರ

ರಫ್ತು ವ್ಯಾಪಾರಕ್ಕೆ ಉತ್ತೇಜನ ನೀಡುವ ದೃಷ್ಟಿಯಿಂದ ರಫ್ತು ಸಿದ್ಧತಾ ಉದರಿಗೆ (ಪ್ಯಾಕಿಂಗ್ ಕ್ರೆಡಿಟ್) ವಿಧಿಸುವ ಬಡ್ಡಿ ದರವನ್ನು 1986ರ ಮಾರ್ಚ್ 1ರಿಂದ ರಿಸರ್ವ್ ಬ್ಯಾಂಕ್ ಈ ರೀತಿ ಪುನರ್ವಿಮರ್ಶಿಸಿದೆ:

1 180 ದಿನಗಳ ವರೆಗೆ—ಶೇ 12 2. 180 ದಿನಗಳ ಅನಂತರ 270 ದಿನಗಳ ವರೆಗೆ (ರಿಸರ್ವ್ ಬ್ಯಾಂಕ್ ಅನುಮತಿ ಪಡೆದು)—ಶೇ 14; 3. 270 ದಿನಗಳನ್ನು ಮೀರಿದ ಅವಧಿಗೆ—ಶೇ 16.5 (ಗರಿಷ್ಠ)

### ಚೆಕ್ ವಸೂಲಿಯಲ್ಲಿ ವಿಳಂಬಕ್ಕೆ ಬಡ್ಡಿ

ಚೆಕ್ ವಸೂಲಿಯ ಕ್ಷೇತ್ರದಲ್ಲಿ ಕಾರ್ಯದಕ್ಷತೆ ಹೆಚ್ಚಿಸುವ ಸಲುವಾಗಿ ವಸೂಲಿಯಲ್ಲಿನ ವಿಳಂಬಕ್ಕೆ ಬಡ್ಡಿ ನೀಡಲು ಬ್ಯಾಂಕುಗಳಿಗೆ ರಿಸರ್ವ್ ಬ್ಯಾಂಕ್ ಆದೇಶಿಸಿದೆ. ಅದರಂತೆ:

1 ವಸೂಲಿಗೆ ಕಳುಹಿಸಲಾದ ಅದೇ ಬ್ಯಾಂಕಿನ ಚೆಕ್, ಡ್ರಾಫ್ಟ್ ಮತ್ತು ಇತರ ಸಂಲೇಖಗಳಿಗೆ 14 ದಿನಗಳಿಗೂ ಮೀರಿದ ಅವಧಿಯ ವಿಳಂಬಕ್ಕೆ ಅದರ ಮೊಬಲಗಿನ ಮೇಲೆ ಉಳಿತಾಯ ಬ್ಯಾಂಕ್ ಖಾತೆಗೆ ಅನ್ವಯವಾಗುವ ಬಡ್ಡಿ ನೀಡಲಾಗುವುದು. 2 ಬೇರೆ ಬ್ಯಾಂಕುಗಳ ಮೇಲೆ ಬರೆದ ಚೆಕ್, ಡ್ರಾಫ್ಟ್ ಸಂಲೇಖಗಳಿಗೆ ವಸೂಲಿಗಾಗಿ ಕಳುಹಿಸಿದ 21 ದಿನಗಳಿಗೆ ಮೀರಿದ ಅವಧಿಗೆ ಅದರ ಮೊಬಲಗಿನ ಮೇಲೆ ಉಳಿತಾಯ ಖಾತೆಯ ಬಡ್ಡಿ ನೀಡಲಾಗುವುದು.

### ಜಪಾನೀ ಬ್ಯಾಂಕುಗಳ ಹಿರಿಮೆ

ಒಟ್ಟು ಆಸ್ತಿಗಳ ದೃಷ್ಟಿಯಿಂದ ಜಪಾನೀ ಬ್ಯಾಂಕುಗಳು ಅಮೆರಿಕದ ಬ್ಯಾಂಕುಗಳನ್ನು ಹಿಂದೆ ಹಾಕಿವೆ. ಅಂತರರಾಷ್ಟ್ರೀಯ ಇತ್ಯರ್ಥಗಳ (ಬ್ಯಾಂಕ್ ಫಾರ್ ಇಂಟರ್‌ನ್ಯಾಷನಲ್ ಸೆಟ್ಲ್‌ಮೆಂಟ್–ಬಿಐಎಸ್) ಪ್ರಕಾರ 1985ರ ಅಕ್ಟೋಬರಿನಲ್ಲಿ ಜಪಾನೀ ಬ್ಯಾಂಕುಗಳು 64,000 ಕೋಟಿ ಡಾಲರ್ ಆಸ್ತಿ ಹೊಂದಿದ್ದುವು. ಇದು ವಿಶ್ವದ ಒಟ್ಟು ಬ್ಯಾಂಕಿಂಗ್ ಕ್ಷೇತ್ರದ ಆಸ್ತಿಯ ಶೇ 26. ಅಮೆರಿಕದ ಬ್ಯಾಂಕುಗಳು 58,000 ಕೋಟಿ ಡಾಲರ್ (ಶೇ 23.4) ಆಸ್ತಿಯಿಂದ ಎರಡನೆಯ ಸ್ಥಾನ ಪಡೆದಿದ್ದುವು. ಫ್ರಾನ್ಸ್ (ಶೇ. 8.9), ಬ್ರಿಟನ್ (ಶೇ. 7.4), ಪ. ಜರ್ಮನಿ (ಶೇ. 6.7) ಇವು ಅನಂತರದ ಸ್ಥಾನಗಳನ್ನು ಪಡೆದಿದ್ದುವು.

### ವಿಶ್ವ ವಿದೇಶಿ ವಿನಿಮಯ ದುಪ್ಪಟ್ಟು

1974ರಲ್ಲಿ ದಿನವೊಂದಕ್ಕೆ 7,500 ಕೋಟಿ ಡಾಲರ್ ಇದ್ದ ವಿಶ್ವದ ವಿದೇಶಿ ವಿನಿಮಯ ವಹಿವಾಟು 1984ರಲ್ಲಿ 15,000 ಕೋಟಿ ಡಾಲರಿಗೆ ಏರಿತೆಂದು ಬ್ಯಾಂಕಿಂಗ್ ಸಂಶೋಧನ ಸಂಸ್ಥೆಯೊಂದರ ವರದಿ ತಿಳಿಸಿದೆ. ಇದರಲ್ಲಿ ಸುಮಾರು ಮೂರನೆಯ ಒಂದು ಭಾಗದಷ್ಟು ವಹಿವಾಟು (4,900 ಕೋಟಿ ಡಾಲರ್) ನಡೆಸುವ ಲಂಡನ್ ಮೊದಲನೆಯ ಸ್ಥಾನವನ್ನು, ನ್ಯೂ ಯಾರ್ಕ್ (ಸುಮಾರು 3,500 ಕೋಟಿ ಡಾಲರ್) ಎರಡನೆಯ ಸ್ಥಾನವನ್ನು ಪಡೆದಿವೆ. ಅನಂತರದ ಸ್ಥಾನ ದಿನವೊಂದಕ್ಕೆ 2,000 ಕೋಟಿ ಡಾಲರ್ ವಹಿವಾಟು ನಡೆಸುವ ಜೂರಿಚ್ಚಿನದು.

---

ಕೆ. ಎನ್. ಮಹಾಬಲ, ಭಾರತೀಯ ಸ್ಟೇಟ್ ಬ್ಯಾಂಕ್, ಬನಶಂಕರಿ ಎರಡನೆಯ ಹಂತ, ಬೆಂಗಳೂರು 560 070

# THE UGAR SUGAR WORKS LIMITED

*Registered Office :*
**WAKHAR BHAG, SANGLI**
**Maharashtra State**

*Factory Office :*
**P. O. UGARKHURD 591 316**
**Dist. Belgaum**
**(Karnataka State)**

*Phone : Sangli-3717*
*Telex : U SUGAR 0193-202*

*Phone : Sangli-3716*
*Gram : 'UGARSUGAR' UGARKHURD*



*Manufacturers of*

* **White Crystal Sugar of All Grades**
* **Quality Industrial Alcohol**
* **Quality Indian Made Foreign Liquors**
* **First in India to get I.S.I. Certification Mark**
* **The present crushing capacity of the Factory is 3,000 Metric Tonnes of Cane Per Day.**

With Best Compliments From



**SUNDEEP PACKAGING INDUSTRIES PRIVATE LIMITED**

A-144 PEENYA INDUSTRIAL ESTATE
PEENYA
BANGALORE-560 058

PHONE : 385448



*Manufacturers of*

**CORRUGATED & CARD BOARD BOXES**

**EXPORTS CONTAINERS & ALLIED PRODUCTS**

R.N. 36702/83





# The Splendour of Immortal Classics.

Each a best-seller in its category. Enchanting millions. In India and abroad. Incense sticks with fragrances blended to perfection. In traditional style. Immortal classics. From the house of Aravinda Parimala, of course.



aravinda parimala works
Mysore - 570 004 (India)


PRINTED BY G. H. KRISHNAMURTHY AT MYSORE PRINTING AND PUBLISHING HOUSE, MYSORE 570 001